ಸನಾತನ ಧರ್ಮ ಮಾಲಾ – ಪುಷ್ಪ ೧

ಋಗ್ವೇದ

# ಆಶ್ವಲಾಯನ ಶ್ರಾದ್ಧ ಪ್ರಯೋಗಃ

ಲೇಖಕರು

ವಿದ್ವಾನ್ ಎಸ್.ವಿ. ಶ್ಯಾಮಭಟ್ಟ

ಪ್ರಕಾಶಕರು



ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ (ರಿ).

ಬೆಂಗಳೂರು 560 004

ಸನಾತನ ಧರ್ಮ ಮಾಲಾ – ಪುಷ್ಪ ೧

ಋಗ್ವೇದ

# ಆಶ್ವಲಾಯನ ಶ್ರಾದ್ಧ ಪ್ರಯೋಗ:

(ಸಮರ್ಪಕ ವಿವರಣೆಯೊಂದಿಗೆ)

ಲೇಖಕರು

ವಿದ್ವಾನ್. ಎಸ್. ವಿ. ಶ್ಯಾಮಭಟ್ಟ

ಪ್ರಕಾಶಕರು:



ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ (ರಿ).

ಬೆಂಗಳೂರು 560 004

ಶ್ರೀಃ

## ಆಶೀರ್ವಾದಗಳು

· ಸಕ್ಕರೆಪಟ್ಟಣದ ವೆಂಕಟಕೃಷ್ಣಯ್ಯ, ಅವರ ಧರ್ಮಪತ್ನೀ ಪಾರ್ವತಮ್ಮ ಇವರ ಗರ್ಭಾಂಬುಧಿಯಲ್ಲಿ ಜನಿಸಿದ ನಮ್ಮ ಶಿಷ್ಯರಾದ ವೇ। ಬ್ರ೦। ಶ್ರೀ ವಿದ್ವಾನ್ ಶ್ಯಾಮಭಟ್ಟರವರು ಬೆಂಗಳೂರು ಶಂಕರಮಠದಲ್ಲಿ ವೇದಾಂತ ವ್ಯಾಸಂಗಮಾಡಿ, ಶಾಸ್ತ್ರಜ್ಞರಾಗಿ, ಕರ್ಮಾನುಷ್ಠಾನತತ್ಪರರಾಗಿ, ಪ್ರದೋಷಸಂಘವನ್ನು ಏರ್ಪಡಿಸಿ, ಅನೇಕ ಜನಗಳಿಗೆ ರುದ್ರ ಚಮಕ ಮತ್ತು ಕರ್ಮಾನುಷ್ಠಾನಕ್ಕೆ ಬೇಕಾದ ಉಪಯುಕ್ತ ಮಂತ್ರಗಳನ್ನು ಬೋಧಿಸುತ್ತಾ ಇದ್ದು, ಜನಪ್ರಿಯರಾಗಿ, ದೇವತಾರ್ಚನ ವಿಧಿ, ನವಗ್ರಹ ಪೂಜಾವಿಧಿ, ಸಂಧ್ಯಾದ್ಯನುಷ್ಠಾನವಿಧಿ, ಮುಂತಾದ ಗ್ರಂಥಗಳನ್ನು ಮುದ್ರಿಸಿ, ಪ್ರಖ್ಯಾತರಾಗಿರುತ್ತಾರೆ. ಅದರಂತೆ ಆಶ್ವಲಾಯನ ಶ್ರಾದ್ಧಪ್ರಯೋಗ, ಎಂಬ ಪುಸ್ತಕವನ್ನು ಬರೆದು, ಅಲ್ಲಿ ಬರತಕ್ಕ ಸಕಲ ವಿಷಯಗಳಿಗೂ ಆಧಾರ ಸಮೇತವಾಗಿ ವಿವರಣೆಯನ್ನು ಮುದ್ರಿಸಿರುವುದು ಬಹಳ ಶ್ಲಾಘನೀಯವಾಗಿದೆ. ಹಾಗ್ಗೂ ಜನಗಳಿಗೆ ತುಂಬಾ ಸಹಾಯಕವಾಗಿದೆ. ಇದನ್ನು ಆಮೂಲಾಗ್ರವಾಗಿ ನೋಡಿ ನನಗೆ ಬಹಳ ಸಂತೋಷವಾಗಿದೆ. ಅಧಿಕಾರವುಳ್ಳ ಎಲ್ಲರೂ ಈ ಪುಸ್ತಕವನ್ನು ಪಡೆದು ಅದರಂತೆ ಅನುಷ್ಠಾನ ಮಾಡುವುದಕ್ಕೂ ಬಹಳ ಸಹಾಯಕವಾಗಿರುತ್ತೆ. ಇವರಿಗೆ ಈಶ್ವರನು ಆಯುರಾರೋಗ್ಯವನ್ನು ಅನುಗ್ರಹಿಸಿ, ಕಾಪಾಡಲೆಂದು ಹಾರೈಸುತ್ತೇನೆ.

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ ವಿಜೇತರು
ವಿದ್ವಾನ್ ಬೊಳೂರು ರಾಮಭಟ್ಟ.
ಅಧ್ಯಕ್ಷರು
ಭಾರತೀಯ ಗೀರ್ವಾಣ ಪ್ರೌಢವಿದ್ಯಾಭಿವರ್ಧಿನೀ
ಮಹಾ ಪಾಠಶಾಲೆ,
ಶೃಂಗೇರಿ ಶಂಕರಮಠ
ಬೆಂಗಳೂರು-4

# ಪ್ರತಿಷ್ಠಾನದ ಅಧ್ಯಕ್ಷರ ನುಡಿ

ವೈದಿಕ ಸಾಹಿತ್ಯ ಮತ್ತು ಪರಂಪರೆಯನ್ನು ಉಳಿಸಿ ಬೆಳೆಸುವುದರ ಜೊತೆಗೆ, ವೇದೋಕ್ತವಾದ ಕರ್ಮಾಚರಣೆಯಲ್ಲಿ ಆಸಕ್ತಿ ಮೂಡಿಸಿ ಅಭಿವೃದ್ಧಿ ಪಡಿಸಬೇಕೆಂಬುದೇ ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನದ ಮೂಲ ಉದ್ದೇಶ.

ತಾನು ಬ್ರಾಹ್ಮಣ ಎಂದು ಹೇಳಿಕೊಳ್ಳುವುದಕ್ಕೆ ನಾಚಿಕೆ ಪಡುತ್ತಿರುವ ಬ್ರಾಹ್ಮಣ ಜನಾಂಗ ಒಂದೆಡೆಯಾದರೆ, ಸನಾತನಧರ್ಮದ ಮೂಲ ಗ್ರಂಥಗಳನ್ನು ಅಧ್ಯಯನ ಮಾಡದೆ ಪಾಶ್ಚಾತ್ಯ ಸಂಸ್ಕೃತಿಯ ವ್ಯಾಮೋಹಕ್ಕೆ ಒಳಗಾಗಿ ನಮ್ಮ ಸಂಸ್ಕಾರ ಮತ್ತು ಸಂಸ್ಕೃತಿಯನ್ನು ಹೀನಾಯವಾಗಿ ನೋಡುವ ಪ್ರವೃತ್ತಿಯಿಂದ ಬ್ರಾಹ್ಮಣ್ಯ ಖಿಲವಾಗುತ್ತಿರುವ ಈ ಸಂದಿಗ್ಧ ಸಮಯದಲ್ಲಿ, ನಮ್ಮ ಆರ್ಷೇಯ ಸಂಪತ್ತಾದ ವೈದಿಕಧರ್ಮದ ಮೂಲಗ್ರಂಥಗಳನ್ನು ನಮ್ಮ ಯುವ ಜನಾಂಗಕ್ಕೆ ಸೂಕ್ತವಾದ ವಿವರಣೆಯೊಡನೆ ಪರಿಚಯ ಮಾಡಿ ಕೊಡುವುದು ಅತ್ಯವಶ್ಯವಾಗಿದೆ.

ಈ ದಿಸೆಯಲ್ಲಿ ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನವು ತನ್ನದೇ ಆದ ಬೃಹದ್ ಯೋಜನೆಯನ್ನು ಹಮ್ಮಿಕೊಂಡಿದೆ. ಇದರಲ್ಲಿ ಕೃಷ್ಣಯಜುರ್ವೇದವನ್ನು ಕನ್ನಡ ಭಾಷಾಂತರ ಮತ್ತು ಉಪಯುಕ್ತವಾದ ವಿವರಣೆಯೊಡನೆ ಹತ್ತು ಸಂಪುಟಗಳಲ್ಲಿ ಪ್ರಕಟಿಸುವುದು ಮೊದಲನೆಯದು. ಈ ಬೃಹತ್ ಯೋಜನೆಯನ್ನು ಯಶಸ್ವಿಯಾಗಿ ನಿರ್ವಹಿಸಲು–ಅನೇಕ ವೇದ ವಿದ್ವಾಂಸರು ಪ್ರತಿಷ್ಠಾನಕ್ಕೆ ತಮ್ಮ ಸಹಾಯ ಹಸ್ತ ನೀಡುತ್ತಿದ್ದಾರೆ. ಇದರಲ್ಲಿ ಈಗಾಗಲೇ ಯಜುರ್ವೇದದ ಮಹತ್ವ, ಯಜ್ಞಗಳ ವಿವರಣೆಗಳನ್ನೊಳಗೊಂಡ ಮೊದಲನೆಯ ಸಂಪುಟವು ಪ್ರಕಾಶಿತವಾಗಿ ವಿದ್ವನ್ಮನ್ನಣೆಗಳಿಸಿದೆ. ಎರಡನೆಯ ಸಂಪುಟವು ಶೀಘ್ರದಲ್ಲಿಯೇ ಬಿಡುಗಡೆಯಾಗುವ ಸಿದ್ಧತೆಯಲ್ಲಿದೆ.

ಇದು ವೇದ ಸಾಹಿತ್ಯದ ಪ್ರಕಟನೆಯ ಭಾಗವಾದರೆ, ಮತ್ತೊಂದು ವೇದೋಕ್ತವಾದ ಕರ್ಮಾಚರಣೆಗಳಲ್ಲಿ ಶ್ರದ್ಧೆಹುಟ್ಟಿಸುವುದಕ್ಕೆ ಉಪಯುಕ್ತವಾದ ಗ್ರಂಥಗಳ ಪ್ರಕಟಣೆ. ಈ ಕರ್ಮಾಚರಣೆಗಳಲ್ಲಿ ಅತ್ಯಂತ ಮುಖ್ಯವಾದುದು ಹಾಗೂ ತಪ್ಪದೇ, ಶ್ರದ್ಧಾಭಕ್ತಿಗಳಿಂದ ಆಚರಿಸಲೇ ಬೇಕಾದುದು ಶ್ರಾದ್ಧಕರ್ಮ.

ಶ್ರಾದ್ಧವೆಂಬುದು ಅಧಿಕಾರಿಗಳಾದವರು ತಪ್ಪದೇ ಆಚರಿಸಬೇಕಾದ ಕರ್ತವ್ಯಕರ್ಮ. ನಮ್ಮ ಜನನಕ್ಕೆ ಕಾರಣರಾಗಿ, ನಮಗೆ ವಿದ್ಯಾಬುದ್ಧಿಯನ್ನು ಕೊಟ್ಟು, ನಮ್ಮ ಸುಖಮಯ ಜೀವನಕ್ಕೆ ಕಾರಣೀ ಭೂತರಾದವರೇ ನಮ್ಮ ಮಾತಾಪಿತೃಗಳು. ಗತಿಸಿದ ಅವರು ಸಂಸ್ಕಾರದಿಂದ ಪಿತೃದೇವತೆಗಳೆನಿಸಿರುತ್ತಾರೆ. ಅವರಿಗೆ ವಿನೀತರಾಗಿ ಕೃತಜ್ಞತೆಗಳನ್ನು ಶ್ರದ್ಧಾಭಕ್ತಿಗಳಿಂದ ಸಲ್ಲಿಸುವ ಕರ್ಮವೇ–ಶ್ರಾದ್ಧ. ಪುತ್ರನೇ ಮುಂತಾದ ಅಧಿಕಾರಿಗಳು ಪ್ರತಿವರ್ಷವೂ ಮಾಡಲೇ ಬೇಕಾದ ಕರ್ತವ್ಯಕರ್ಮವಿದು.

ಇಂತಹ ಅತ್ಯವಶ್ಯವಾಗಿ ಮಾಡಬೇಕಾದ ವೈದಿಕಕರ್ಮವನ್ನು ಆಶ್ವಲಾಯನರ ಸಂಪ್ರದಾಯಕ್ಕನುಗುಣವಾಗಿ ವಿವರಿಸಲಾಗಿರುವ ಈ "ಆಶ್ವಾಲಾಯನ ಶ್ರಾದ್ಧಪ್ರಯೋಗವನ್ನು ವಿದ್ವಾನ್. ಎಸ್.ವಿ. ಶ್ಯಾಮಭಟ್ಟರು ರಚಿಸಿರುತ್ತಾರೆ. ಸೂಕ್ತ ಉಪಯುಕ್ತ ವಿವರಣೆಯನ್ನೊಳಗೊಂಡಿರುವ ಈ ಗ್ರಂಥವನ್ನು ಪ್ರತಿಷ್ಠಾನದ ಮಾಲೆಯಲ್ಲಿ ಪ್ರಥಮ ಪುಷ್ಪವನ್ನಾಗಿ ಪ್ರಕಟನ ಮಾಡುವುದಕ್ಕೆ ಸೌಜನ್ಯದಿಂದ ಅನುಮತಿ ನೀಡಿದ ವಿದ್ವಾನ್. ಎಸ್.ವಿ. ಶ್ಯಾಮಭಟ್ಟರವರಿಗೆ ಪ್ರತಿಷ್ಠಾನದ ಪರವಾಗಿ ಧನ್ಯವಾದಗಳು.

ಆಸ್ತಿಕರೆಲ್ಲರೂ ಈ ಪುಸ್ತಕವನ್ನುಪಯೋಗಿಸಿ ಶ್ರೇಯೋವಂತರಾದರೆ ನಮ್ಮ ಶ್ರಮ ಸಾರ್ಥಕ.

ಪ್ರತಿಷ್ಠಾನದ ಈ ಮಾಲಿಕೆಯಲ್ಲಿ ವೇದೋಕ್ತವಾದ ಕರ್ಮಗಳ ವಿಷಯದಲ್ಲಿ ವಿವರಣಾತ್ಮಕವಾದ ಇನ್ನೂ ಹತ್ತಾರು ಗ್ರಂಥಗಳನ್ನು ಪ್ರಕಟಿಸಬೇಕೆಂಬುದು, ಹಾಗೂ ತನ್ಮೂಲಕವಾಗಿ ನಮ್ಮ ಸನಾತನ ಧರ್ಮದ ಅಭಿವೃದ್ಧಿಗೆ ಯತ್ಕಿಂಚಿತ್ ಸೇವೆ ಸಲ್ಲಿಸಬೇಕೆಂಬುದು ಪ್ರತಿಷ್ಠಾನದ ಆಶಯ.

ಬಿ.ಎನ್.ವಿ. ಸುಬ್ರಹ್ಮಣ್ಯಂ
ಅಧ್ಯಕ್ಷರು
ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ
ಬೆಂಗಳೂರು–4

ಶ್ರೀ:

# ಕೃತಜ್ಞತೆ

ಪಿತೃಕಲ್ಪವೆಂಬುದು ಒಂದು ದೊಡ್ಡ ಭಂಡಾರ. ನಾಲ್ಕು ವೇದಗಳೂ, ಅಷ್ಟಾದಶ ಪುರಾಣಗಳೂ, ಬೋಧಾಯನ, ಆಶ್ವಲಾಯನ, ಆಪಸ್ತಂಬ, ಗೌತಮ ಮನು ಮುಂತಾದ ಮಹರ್ಷಿಗಳ ಧರ್ಮ ಗ್ರಂಥಗಳೂ ಈ ಪಿತೃಕಲ್ಪಕ್ಕೆ ಆಕರಗಳು. ಅವುಗಳಲ್ಲಿ ಪ್ರತಿಪಾದಿಸಿರುವ ವಿಷಯಗಳನ್ನು ಸಂಗ್ರಹಿಸಲು ಅಲ್ಪಮತಿಯಾದ ನನಗೆಲ್ಲಿ ಸಾಧ್ಯ? ಆದರೂ, ಬಹುಜನ ವಿದ್ವಾಂಸರ ನೆರವಿನಿಂದ ಸಂಗ್ರಹಿಸಿದ್ದ ವಿಷಯಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸುವ ಹಂಬಲ ನನಗೆ ಬಹು ವರ್ಷಗಳಿಂದಲೂ ಸುಪ್ತವಾಗಿತ್ತು. ಯಾವ ಕಾರ್ಯಸಾಧನೆಗೂ ಒಂದು ಸುಯೋಗ ಬೇಕಲ್ಲಾ!

ಆಯೋಗ ಒದಗಿದ್ದು ನನ್ನ ಪುಣ್ಯ ವಿಶೇಷವೇ.

ಸಾಮಾನ್ಯ ಜನರು ಧಾರ್ಮಿಕ ಗ್ರಂಥಗಳನ್ನು ಮುದ್ರಿಸಿ, ಪ್ರಕಟಿಸಿ, ಪ್ರಸಾರಮಾಡಿ, ಜನಜಾಗೃತಿಯನ್ನುಂಟು ಮಾಡುವುದು ಸುಲಭ ಸಾಧ್ಯವಲ್ಲ.

ಇಂತಹ ದುಃಸ್ಥಿತಿಯ ಕಾಲದಲ್ಲಿ ಧರ್ಮಜಾಗೃತಿಗಾಗಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟು, ವೇದ, ಧರ್ಮ ಪ್ರಕಾಶಕ್ಕಾಗಿ, ಹಾಗೂ, ಪ್ರಸಾರಕ್ಕಾಗಿ; ಹಗಲಿರುಳೂ ತಮ್ಮ ತನು–ಮನ–ಧನಗಳನ್ನು ಧಾರೆಯೆರೆಯುತ್ತಿರುವ ''ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನದ'' ಅಧ್ಯಕ್ಷರೂ, ಅಖಿಲ ಕರ್ನಾಟಕ ಬ್ರಾಹ್ಮಣ ಮಹಾಸಭೆಯ ಅಧ್ಯಕ್ಷರೂ ಆದ ಸನ್ಮಾನ್ಯ ಬಿ.ಎನ್.ವಿ. ಸುಬ್ರಹ್ಮಣ್ಯಂ ರವರನ್ನು ಈ ''ಆಶ್ವಲಾಯನ ಶ್ರಾದ್ಧ ಪ್ರಯೋಗ'' ಪುಸ್ತಕದ ಪ್ರಕಾಶನ ಕಾರ್ಯಕ್ಕೆ ತೊಡಗಿಸಿದವನು ಸರ್ವರ ಅಂತರ್ಯಾಮಿಯಾದ ಪರಮಾತ್ಮನೇ. ಅವರ ಔದಾರ್ಯ, ಸೌಜನ್ಯ ಹಾಗೂ ಸಹೃದಯತೆ ಅಸಾಧಾರಣವಾದುದು. ಈ ಪುಸ್ತಕವನ್ನು ''ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನದ ವತಿಯಿಂದ ಪ್ರಕಟಿಸಿ ಕೀರ್ತಿಗೆ ಭಾಗಿಗಳಾಗಿರುವ ಪ್ರತಿಷ್ಠಾನದ ಅಧ್ಯಕ್ಷರಿಗೆ ಅನಂತಾನಂತ ಧನ್ಯವಾದಗಳನ್ನು ಸಮರ್ಪಿಸಬಯಸುತ್ತೇನೆ.

ಈ ಪುಸ್ತಕವನ್ನು ಆಮೂಲಾಗ್ರವಾಗಿ ಪರಿಶೀಲಿಸಿ, ಸೂಕ್ತವಾಗಿ ಮಾರ್ಗದರ್ಶನ ಮಾಡಿ, ಉಪಕರಿಸಿರುವ ನನ್ನ ಪೂಜ್ಯ ಗುರುವರ್ಯರಾದ ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ ವಿಜೇತರೂ, ಪಂಡಿತ ಪ್ರವರೇತ್ಯಾದಿಬಿರುದಾಂಕಿತರೂ, ಬೆಂಗಳೂರು ಶೃಂಗೇರಿ ಶಂಕರಮಠದ ಸಂಸ್ಕೃತ ಮಹಾವಿದ್ಯಾಲಯದ ಅಧ್ಯಕ್ಷರೂ ಆದ ವಿದ್ವಾನ್, ಬೊಳೂರು ರಾಮಭಟ್ಟರೂ, ಹಾಗೂ ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ ವಿಜೇತರೂ, ಪಂಡಿತಪ್ರವರೇತ್ಯಾದಿ ಬಿರುದಾಂಕಿತರೂ, ಬೆಂಗಳೂರು ಶೃಂಗೇರಿ ಶಂಕರಮಠದ ಸಂಸ್ಕೃತ ಮಹಾ ವಿದ್ಯಾಲಯದ ಅದ್ವೈತವೇದಾಂತ ಪ್ರಾಧ್ಯಾಪಕರೂ ಆದ, ವಿದ್ವಾನ್, ಕೆ. ಕೃಷ್ಣಜೋಯಿಸರೂ ಸಹ ಆಶೀರ್ವಾದ ಪತ್ರಗಳನ್ನು ಕೊಟ್ಟು, ಅನುಗ್ರಹಿಸಿರುತ್ತಾರೆ. ಈ ಉಭಯ ಗುರುವರ್ಯರಿಗೂ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸ ಬಯಸುತ್ತೇನೆ.

ಈ ಪುಸ್ತಕ ಪ್ರಕಾಶನ ಕಾರ್ಯಕ್ಕೆ ನಿಮಿತ್ತರೂ, ಸೂಕ್ತಸಲಹೆ ನೀಡಿದವರೂ ಆದ "ಶ್ರೀ ಸುರಸರಸ್ವತೀ ಸಭೆಯ ಕಾರ್ಯದರ್ಶಿಗಳೂ, ಗುಣಪಕ್ಷಪಾತಿಗಳೂ, ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರೂ ಆದ ಸನ್ಮಾನ್ಯ ಎಸ್. ರಾಮಚಂದ್ರ ಶಾಸ್ತ್ರಿಗಳನ್ನು ಎಂದಿಗೂ ಮರೆಯುವಂತಿಲ್ಲ. ಅವರಿಗೂ ಅನಂತ ಧನ್ಯವಾದಗಳು.

ಈ ಪುಸ್ತಕವನ್ನು ತಪ್ಪುಗಳಿಲ್ಲದಂತೆ ಅಂದವಾಗಿ ಮುದ್ರಿಸಿ ಕೊಟ್ಟಿರುವ "ಪಯೋನಿಧಿ ಪ್ರಿಂಟರ್ಸ್" ನ ಮಾಲಿಕರಾದ ಎಚ್. ವೆಂಕಟರಾಮಯ್ಯ ಹಾಗೂ ಅವರ ಕುಮಾರರಿಗೂ, ಅನಂತ ಧನ್ಯವಾದಗಳು. ಈ ಪುಸ್ತಕದಲ್ಲಿ ಕಂಡುಬರುವ ದೋಷಗಳನ್ನು ಸಹೃದಯರು ಕೃಪೆಮಾಡಿ ತಿಳಿಸಿಕೊಟ್ಟು, ಮುಂದಿನ ಮುದ್ರಣದಲ್ಲಿ ಸರಿಪಡಿಸಿಕೊಳ್ಳಲು ಉಪಕರಿಸಬೇಕಾಗಿ ವಿನಮ್ರ ಪ್ರಾರ್ಥನೆ.

ತಾ-

ಇತಿ ವಿದ್ವಾನ್ ಎಸ್.ವಿ. ಶ್ಯಾಮಭಟ್ಟ,
ಪ್ರದೋಷಸಂಘ,
ನಂ 103, 1ನೇ ಬ್ಲಾಕ್. ರಾಜಾಜಿನಗರ
ಬೆಂಗಳೂರು.

# ಸನಾತನ ಧರ್ಮ ಮಾಲಾ - ಪುಷ್ಪ ೧

## ಆಶ್ವಲಾಯನ ಶ್ರಾದ್ಧ ಪ್ರಯೋಗಃ

ಅಸ್ಮದ್ಗುರೂನ್ ಕುಲಂ ದೈವಂ ಪಿತೄನ್ ಭಕ್ತ್ಯಾ ಪ್ರಣಮ್ಯ ಚ।

ಪ್ರತ್ಯಾಬ್ದಿಕಂ ಶ್ರಾದ್ಧಮಹಂ ವಿವೃಣೋಮಿ ಯಥಾಮತಿ॥

ಕರ್ಮ ಎಂದರೆ ಕೆಲಸ, ಇದು ಸಾಮಾನ್ಯಾರ್ಥ ಮನೋವಾಕ್ಕಾಯಗಳಿಂದ ಮಾಡುವ ಸಕಲ ವೈದಿಕ-ಲೌಕಿಕ, ಒಳ್ಳೆಯ ಮತ್ತು ಕೆಟ್ಟ ಕರ್ಮಗಳನ್ನೂ ಕರ್ಮ ಶಬ್ದವು ಬೋಧಿಸುತ್ತದೆ. ಆದರೆ ಶಾಸ್ತ್ರಗಳಲ್ಲಿ ಈ ಶಬ್ದವನ್ನು ವಿಶೇಷಾರ್ಥದಲ್ಲಿ ಪ್ರಯೋಗಿಸುತ್ತಾರೆ. ''ನಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್'' ಎಂಬ ಗೀತಾವಚನವು ಸಾಮಾನ್ಯಾರ್ಥವನ್ನು ತಿಳಿಸುತ್ತದೆ. ಆದರೆ ಅಲ್ಲಿಯೇ ಹೇಳಿರುವ ''ಕುರು ಕರ್ಮೈವ ತಸ್ಮಾತ್ತ್ವಮ್'' ಸ್ವಧರ್ಮೇ ನಿಧನಂ ಶ್ರೇಯಃ'' ಎಂಬಲ್ಲಿ ವಿಶೇಷಾರ್ಥವನ್ನು ತಿಳಿಸುತ್ತದೆ. ಕರ್ಮ ಶಬ್ದವನ್ನು ಪುಣ್ಯ-ಪಾಪ, ಧರ್ಮ-ಅಧರ್ಮ ಕರ್ಮಪರಿಣಾಮವಾದ ಸಂಸ್ಕಾರ-ವಾಸನಾ ಮುಂತಾದ ವಿಶೇಷಾರ್ಥಗಳಲ್ಲಿಯೂ ಶಾಸ್ತ್ರಗಳಲ್ಲಿ ಬಳಸಲಾಗಿದೆ.

ಲೌಕಿಕವಾದ ಹೊಡಿ, ಬಡಿ, ತಿನ್ನು ಮುಂತಾದ ಕ್ರಿಯೆಗಳು ದೃಷ್ಟವಾದ ಸದಸತ್ ಫಲವನ್ನು ಕೊಡುತ್ತಾ ಪ್ರಖ್ಯಾತವಾಗಿವೆ. ಆದರೆ, ಶಾಸ್ತ್ರ ಪ್ರತಿಪಾದ್ಯವಾದ ''ಸ್ವರ್ಗಕಾಮೋ ಯಜೇತ'' ನ ಕಳಂಜಂ ಭಕ್ಷಯೇತ್'' ಮುಂತಾದ ವಾಕ್ಯಗಳಿಂದ ಬೋಧಿತವಾದ ಕ್ರಿಯಾಪರಿಣಾಮಗಳು ಅದೃಷ್ಟವಾದ ಸದಸತ್ ಫಲಕ್ಕೆ ಕಾರಣವಾಗಿವೆ ಎಂಬುದನ್ನು ಶಾಸ್ತ್ರದಿಂದಲೇ ತಿಳಿಯಬೇಕು. ಶಾಸ್ತ್ರಗಳೆಂದರೆ, ವೇದಗಳು ಸ್ಮೃತಿಗಳು, ಧರ್ಮಶಾಸ್ತ್ರವಚನಗಳು. ವೇದಗಳು-ಅಪೌರುಷೇಯವೂ, ಸ್ವತಃಪ್ರಮಾಣವೂ, ಆದ ಶಬ್ದರಾಶಿಗಳು, ಇವುಗಳಲ್ಲಿ ಪುರುಷಸಾಧ್ಯವಾದ ಭ್ರಮಪ್ರಮಾದ ವಚನಗಳ ಲೇಶವೂ ಇಲ್ಲ. ವೇದಬೋಧ್ಯ ವಿಷಯಗಳನ್ನು ಪುಷ್ಟೀಕರಿಸುವ, ಶೌನಕ, ಆಶ್ವಲಾಯನ, ಆಪಸ್ತಂಬ, ವ್ಯಾಸ ಗೌತಮ, ಬೋಧಾಯನಾದಿ, ಮಹರ್ಷಿಗಳ ವಚನಗಳೇ, ಸ್ಮೃತಿ ಹಾಗೂ ಧರ್ಮಶಾಸ್ತ್ರ ವಚನಗಳು. ಕರ್ತವ್ಯ-ಅಕರ್ತವ್ಯಗಳ ಬಗ್ಗೆ

'ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ'' "ಶ್ರುತಿ ಸ್ಮೃತೀ ಮಮೈವಾಜ್ಞೇ'' ಎಂಬ ಗೀತಾವಚನದಂತೆ ಶಾಸ್ತ್ರಗಳೇ ಪರಮ ಪ್ರಮಾಣ.

ಶಾಸ್ತ್ರಗಳಲ್ಲಿ ಈ ಭೂಮಿಯಲ್ಲಿ ಜನಿಸಿದ ಪ್ರತಿಯೊಬ್ಬ ಮಾನವನಿಗೂ, ಮಾಡಲೇ ಬೇಕಾದ ಹಾಗೂ ಬಿಡಲೇ ಬೇಕಾದ ಕರ್ಮಗಳನ್ನು, ಕಾಮ್ಯಕರ್ಮಗಳನ್ನೂ, ಪ್ರಾಯಶ್ಚಿತ್ತ ಕರ್ಮಗಳನ್ನೂ ನಾನಾ ರೀತಿಯಿಂದ ಬೋಧಿಸಲಾಗಿದೆ. ಅವೇ ವರ್ಣಾಶ್ರಮ ಧರ್ಮಗಳು. ಅವರವರ ಧರ್ಮಗಳು ಅವರವರಿಗೆ ಪರಮ ಶ್ರೇಷ್ಠವಾದವುಗಳು. ಅವುಗಳಲ್ಲಿ ಮೇಲು ಕೀಳೆಂದು ಭಾವಿಸಿ ಅನ್ಯ ಧರ್ಮವನ್ನವಲಂಭಿಸುವುದು ಮಹಾಪರಾಧ. "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ'' ಎಂದು ಗೀತಾಚಾರ್ಯರು ಅರ್ಜುನನ ನೆಪದಲ್ಲಿ ಎಲ್ಲರಿಗೂ ಎಚ್ಚರಿಕೆ ನೀಡಿದ್ದಾರೆ. ಧರ್ಮ ಸಾಂಕರ್ಯವು ಅಕ್ಷಮ್ಯಾಪರಾಧ. ಮಾನವ ಜನ್ಮವು ಅತ್ಯಂತ ಹಿರಿದಾದುದು.

ಆದುದರಿಂದ ಎಲ್ಲರೂ ತಮ್ಮ ತಮ್ಮ ವಿಧಿ ವಿಹಿತ ಕರ್ತವ್ಯಗಳನ್ನು ನಿರ್ವಹಿಸಬೇಕು. ಪ್ರತಿಯೊಬ್ಬನ ಮುಖ್ಯ ಗುರಿಯೂ ಮೋಕ್ಷವೇ, ಅದನ್ನು ಸಾಧಿಸಲು ತಿಳಿಸಿರುವ ಮಾರ್ಗಗಳು ಮಾತ್ರ ಬೇರೆ.

ಬ್ರಾಹ್ಮಣ ವರ್ಣಕ್ಕೆ ವಿಧಿಸಿರುವ ಕರ್ತವ್ಯಗಳು ಬಹಳ ಜವಾಬ್ದಾರಿಯುತವಾದವು. ಹಾಗೂ ಕ್ಲೇಶ ಸಾಧ್ಯವಾದವುಗಳು. ಇವರು ತಾವೂ ಕೃತಾರ್ಥರಾಗಬೇಕು. ಇತರರನ್ನೂ ಕೃತಾರ್ಥರನ್ನಾಗಿ ಮಾಡಬೇಕು.

"ಜಾಯಮಾನೋ ವೈ ಬ್ರಾಹ್ಮಣಃ ತ್ರಿಭಿಋಣೈವಾಜಾಯತೇ'' ಎಂದರೆ ತಾಯಿಯ ಗರ್ಭದಿಂದ ಜನಿಸುತ್ತಲೇ ಬ್ರಾಹ್ಮಣನು ದೇವ ಋಣ, ಋಷಿಋಣ, ಪಿತೃ ಋಣ, ಎಂಬ ಮೂರು ಋಣಗಳಿಂದ ಬದ್ಧನಾಗಿದ್ದಾನೆ ಎಂದು ಶ್ರುತಿಯು ಎಚ್ಚರಿಸುತ್ತಿದೆ. ಹಾಗೆಯೇ ಯಜ್ಞ, ಯಾಗ, ದೇವತಾರಾಧನೆ ಮುಂತಾದವುಗಳಿಂದ ದೇವ ಋಣವನ್ನೂ, ಅಧ್ಯಯನ, ಅಧ್ಯಾಪನಾದಿಗಳಿಂದ ಋಷಿಋಣವನ್ನು, ಅಂತ್ಯೇಷ್ಟಿ ಪರ್ವಕಾಲಗಳಲ್ಲಿ ಮಾಡಬೇಕಾದ ಶ್ರಾದ್ಧಾದಿಗಳಿಂದ, ಪಿತೃ ಋಣವನ್ನೂ, ತೀರಿಸಿ, ಋಣ ಮುಕ್ತರಾಗಲೂ ಉಪಾಯವನ್ನು ಬೋಧಿಸಿದೆ. **ಕೊನೆಯದಾದ** ಪಿತೃ ಋಣವು ಬ್ರಾಹ್ಮಣನಿಗೆ ಮಾತ್ರವಲ್ಲ. ಪ್ರತಿಯೊಬ್ಬ ಮಾನವನಿಗೂ **ಸಂಬಂಧಿಸಿದುದು**. ಪ್ರತಿಯೊಬ್ಬರೂ

ಋಣಮುಕ್ತರಾಗಲು ಮಾರ್ಗದರ್ಶನ ಮಾಡಿದ್ದಾರೆ. ಶ್ರಾದ್ಧಾದಿಗಳೇ ಈ ಋಣದಿಂದ ಮುಕ್ತರಾಗಲು ಉಪಾಯ. ಇದನ್ನು ಶಾಸ್ತ್ರದಿಂದಲೇ ಅರಿಯಬೇಕು.

## ಪಿತೃ ಋಣ

ಪಿತೃ ಎಂದರೆ ನಮಗೆ ಜನ್ಮಕೊಟ್ಟು, ರಕ್ಷಿಸಿ, ಪೋಷಿಸಿ, ನಮ್ಮ ಸರ್ವವಿಧ ಪ್ರಗತಿಗೂ ಕಾರಣರಾದ ತಾಯಿ ತಂದೆಗಳು. ಅವರನ್ನು ಶ್ರುತಿಯಲ್ಲಿ

''ಮಾತೃದೇವೋ ಭವ'' ''ಪಿತೃದೇವೋ ಭವ''

ಮಾತಾಪಿತೃಗಳನ್ನು ದೇವರೆಂದು ತಿಳಿ ಎಂದು ಬೋಧಿಸಿದೆ. ಆದುದರಿಂದ

''ಜೀವತೋ ರ್ವಾಕ್ಯಕರಣಾತ್ ಶ್ರಾದ್ಧೇ ಭೂರಿಪ್ರದಾನತಃ

ಗಯಾಯಾಂ ಪಿಂಡದಾನಾಚ್ಚ ತ್ರಿಭಿಃ ಪುತ್ರಸ್ಯ ಪುತ್ರತಾ॥

''ಪುಂನಾಮ್ನೋ ನರಕಾತ್ತ್ರಾಯತ ಇತಿ ಪುತ್ರಃ''

ಈ ಪ್ರಮಾಣ ವಚನಗಳಂತೆ, ತಂದೆತಾಯಿಗಳು ಬದುಕಿರುವಾಗ ಅವರ ಮನಸ್ಸಿಗೆ ನೋವನ್ನುಂಟುಮಾಡದೆ ಶುಶ್ರೂಷೆ ಮಾಡುತ್ತಲೂ, ಅವರ ಅಂತ್ಯಕಾಲದಲ್ಲಿ, ಅಂತ್ಯಕರ್ಮಗಳನ್ನು, ವಿತ್ತಶಾಠ್ಯವಿಲ್ಲದೆ, ವಿಧಿವಿಹಿತ ರೀತಿಯಲ್ಲಿ ಮಾಡಿ, ಗಯೆಯಲ್ಲಿ ವಿಹಿತವಾದ ಶ್ರಾದ್ಧಾದಿಗಳನ್ನು ಮಾಡಿದವನು 'ಪುತ್ರ' ಎಂಬ ಹೆಸರಿಗೆ ಅರ್ಹನು. ''ಪುತ್'' ಎಂಬ ನರಕದಿಂದ ಪಾರುಮಾಡುವವನೇ ಪುತ್ರನು. ಎಂದು ತಿಳಿಸಿರುತ್ತಾರೆ. ಅಲ್ಲದೆ ಐಹಿಕವಾದ ಸಕಲ ಅಭ್ಯುದಯಗಳಿಗೂ, ನಿಶ್ರೇಯಸಕ್ಕೂ ಪಿತೃಗಳೇ ಮೂಲ ಕಾರಣರು ಎಂದು ಶ್ರುತಿ, ಸ್ಮೃತಿ, ಪುರಾಣಗಳು ಸಾರುತ್ತಿವೆ. ಆದುದರಿಂದ ಅವರ ಜೀವಿತಕಾಲದಲ್ಲಿ ಮನಸಾರೆ ಸೇವೆಗೈದು, ಅವರು ಗತಿಸಿದ ಅನಂತರ ವಿಧಿವಿಹಿತವಾಗಿ ಶ್ರಾದ್ಧಾದಿಗಳನ್ನು ಭಕ್ತಿ ಶ್ರದ್ಧೆಯಿಂದ ವಿಹಿತ ಕಾಲಗಳಲ್ಲಿ ತಪ್ಪದೆ ಆಚರಿಸುತ್ತಾ, ಅವರ ಋಣದಿಂದ ಮುಕ್ತರಾಗಬೇಕು. ಇದು ಪ್ರತಿಯೊಬ್ಬ ಮಾನವನ ಅವಶ್ಯಕರ್ತವ್ಯವಾಗಿದೆ. ಈ ಪುಸ್ತಕವಲ್ಲಿ ಪ್ರತಿವರ್ಷವೂ ತಂದೆ, ತಾಯಿ ಮುಂತಾದವರು ನಮ್ಮನ್ನಗಲಿದ ಚಾಂದ್ರಮಾನ ತಿಥಿಯಂದು, ಅವರನ್ನು ಸ್ಮರಿಸುತ್ತಾ, ಭಕ್ತಿ ಶ್ರದ್ಧೆಗಳಿಂದ ಆಚರಿಸುವ'' ಪ್ರತಿಸಾಂವತ್ಸರಿಕ ಮೃತಾಹಾನ್ನ ಶ್ರಾದ್ಧದ'' ಕ್ರಮಬದ್ಧ ಪ್ರಯೋಗವನ್ನು ಸಮರ್ಪಕ ವಿವರದೊಂದಿಗೆ ಬರೆಯಲಾಗಿದೆ. ಈ ಶ್ರಾದ್ಧಕ್ಕೆ ಸಪ್ತಹವಿಸ್ಸಂಸ್ಥೆಗಳಲ್ಲಿ ಒಂದಾದ

''ಪಿಂಡಪಿತೃಯಜ್ಞವೇ'' ಮೂಲಪ್ರಕೃತಿ. ಇದರಲ್ಲಿ ತ್ರಿಪಿಂಡವಿಧಾನವು ವಿಹಿತವಾಗಿದೆ. ಇದನ್ನೇ ಪಾರ್ವಣ ಶ್ರಾದ್ಧ ಎಂದೂ ಹೇಳಿದ್ದಾರೆ.

## – ಶ್ರಾದ್ಧ ವಿವರಣೆ –

ಇಲ್ಲಿ ಪಾರ್ವಣ ಎಂದರೆ ''ಅಮಾವಾಸ್ಯಾಯಾಂ ಪಿತೃಭ್ಯಃ'' ಎಂಬ ಗೌತಮರ ವಚನದಂತೆ ಅಮಾವಸ್ಯೆಯಂದು ಆಚರಿಸುವ ಪಿತೃಕರ್ಮ. ''ಪಿತೃನ್ ಉದ್ದಿಶ್ಯ ಬ್ರಾಹ್ಮಣೇಭ್ಯಃ ಶ್ರದ್ಧಯಾ ಯದ್ದೀಯತೇ ತತ್ ಶ್ರಾದ್ಧಮ್। ಎಂಬ ಆಶ್ವಲಾಯನ ಸೂತ್ರ ವೃತ್ತಿಕಾರರ ವಚನದಂತೆ, ಬ್ರಾಹ್ಮಣರಿಗೆ ಪಿತೃಗಳನ್ನು ಉದ್ದೇಶಿಸಿ, ಶ್ರದ್ಧೆಯಿಂದ ಏನನ್ನು ಕೊಡುತ್ತೇವೆಯೋ ಅದು ಶ್ರಾದ್ಧ. ಶ್ರದ್ಧೆ ಎಂದರೆ ಒಂದು ಕೆಲಸವು ಕೈಗೂಡಲು ಅತ್ಯಗತ್ಯವಾದ ಉತ್ಸಾಹ, ಆಸಕ್ತಿ ಮತ್ತು ಅದರ ಪೂರ್ಣ ಅರಿವು. ಈ ಶ್ರದ್ಧೆ ನಾವು ಮಾಡುವ ಎಲ್ಲ ಕೆಲಸಗಳಿಗೂ ಅಗತ್ಯವೇ. ಆದರೆ, ಪಿತೃಗಳನ್ನು ಉದ್ದೇಶಿಸಿ, ತನ್ನ ಮತ್ತು ತನ್ನ ಕುಟುಂಬದ ಅಭ್ಯುದಯ ನಿಶ್ರೇಯಸ್ಸುಗಳಿಗಾಗಿ, ಪುತ್ರನೇ ಮುಂತಾದ ಅಧಿಕಾರಿಗಳು, ವಿಹಿತ ದೇಶ, ಕಾಲಗಳಲ್ಲಿ ವಿಧಿ ವಿಹಿತ ಕ್ರಮವನ್ನು ಚಾಚೂ ತಪ್ಪದೆ, ವಿಶೇಷ ನಿಯಮಗಳನ್ನು ತಪ್ಪದೇ ಪರಿಪಾಲಿಸುತ್ತಾ, ಪಕ್ವಾನ್ನ, ಆಮದ್ರವ್ಯ, ಹಿರಣ್ಯ, ತಿಲತರ್ಪಣ, ಜಲತರ್ಪಣಾದಿಗಳಿಂದ ತೃಪ್ತಿಪಡಿಸುವ ವಿಶೇಷ ಕರ್ಮದಲ್ಲಿ ಶ್ರಾದ್ಧ ಶಬ್ಧವು ರೂಢವಾಗಿದೆ. ಪಾರ್ವಣ ಶ್ರಾದ್ಧವೆಂದರೂ ಇದೇ. ಪಿತ್ರಾದಿ ತ್ರಯರನ್ನೋ, ಮಾತ್ರಾದಿ ತ್ರಯರನ್ನೋ ಮಾತಾಮಹಾದಿ ತ್ರಯರನ್ನೋ ಮಾತಾಮಹ್ಯಾದಿತ್ರ ಯರನ್ನೋ ಉದ್ದೇಶಿಸಿ ಮಾಡುವ ಶ್ರಾದ್ಧಕ್ಕೆ ಪಾರ್ವಣಶ್ರಾದ್ಧವೆಂದು ಹೆಸರು. ಈ ಪಾರ್ವಣ ಶ್ರಾದ್ಧದಲ್ಲಿ ಪಾಣಿಹೋಮ, (ಅಗ್ನೌಕರಣ) ಬ್ರಾಹ್ಮಣ ಭೋಜನ, ಪಿಂಡಪ್ರದಾನ ಈ ಮೂರೂ ಪ್ರಧಾನವಾಧವುಗಳು.

ಹೋಮಶ್ಚ ಪಿಂಡದಾನಂ ಚ ತಥಾ ಬ್ರಾಹ್ಮಣಭೋಜನಮ್।

ಶ್ರಾದ್ಧ ಶಬ್ದಾಭಿಧೇಯಂ ಸ್ಯಾತ್ ಏಕಸ್ಮಿನ್ ಔಪಚಾರಿಕಮ್।

ಈ ಮೂರರಲ್ಲಿ ಒಂದನ್ನೇ ಶ್ರಾದ್ಧ ಎಂದು ಹೇಳುವುದು ಔಪಚಾರಿಕವಾದ ಮಾತು. ಗಯೆ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ತೀರ್ಥಶ್ರಾದ್ಧವನ್ನು ಆಚರಿಸಿದವರಿಗೆ ಅಲ್ಲಿ, ನಿಮಂತ್ರಿತರಾದ ಬ್ರಾಹ್ಮಣರು ''ನಿಮ್ಮ ಪಿತೃಗಳು ಮುಕ್ತರಾಗಿದ್ದಾರೆ. ಶ್ರಾದ್ಧಾದಿಗಳನ್ನು ನೀವು ಇನ್ನು ಮುಂದೆ ಮಾಡಬೇಕಾಗಿಲ್ಲ'

ಎಂದು ಆಶೀರ್ವದಿಸುತ್ತಾರೆ. ಅದು ಕ್ಷೇತ್ರಮಹಿಮೆಯನ್ನು ತಿಳಿಸುವ ಅರ್ಥವಾದ. ಜೀವಂತವಾಗಿ ಇರುವ ವರೆಗೂ, ತರ್ಪಣ, ಪಾರ್ವಣ ಶ್ರಾದ್ಧಾದಿಗಳನ್ನು ಸರ್ವಥಾ ಬಿಡಲೇಬಾರದು. ಅಶ್ರದ್ಧೆಯಿಂದ ಪಿತೃಗಳಿಲ್ಲವೆಂದು ನಿಶ್ಚಯಿಸಿ, ಶ್ರಾದ್ಧಾದಿಗಳನ್ನು ಮಾಡದಿರುವವನ ರಕ್ತವನ್ನು ಪಿತೃಗಳು ಹೀರುತ್ತಾರೆ. (ಅಂದರೆ ಅವರು ನಿರ್ವಂಶರಾಗುತ್ತಾರೆ) ಎಂದೂ, ಸ್ಮೃತಿಗಳಲ್ಲಿ ಎಚ್ಚರಿಸಿರುತ್ತಾರೆ. ಈ ಪಾರ್ವಣ ಶ್ರಾದ್ಧ ಅಥವಾ ಪ್ರತಿ ಸಾಂವತ್ಸರಿಕ ಮೃತಾಹಾನ್ನಶ್ರಾದ್ಧದ ಬಗ್ಗೆ ಕೆಲವು ಮುಖ್ಯ ವಿಷಯಗಳನ್ನು ತಿಳಿಯುವುದು ಅಗತ್ಯವಾಗಿದೆ. ಈ ಕರ್ಮದಲ್ಲಿ ಪುತ್ರಾದಿ ಕರ್ತೃಗಳು, ಪಿತೃಗಳು, ಭೋಕ್ತೃಗಳು, ಪಾಣಿಹೋಮ, ವಿಪ್ರಭೋಜನ, ಪಿಂಡಪ್ರದಾನ, ಇವು ಮುಖ್ಯ ವಿಷಯಗಳು.

## – ಅಧಿಕಾರಿಗಳು –

ತಮ್ಮ ಸ್ವಂತ ಮಕ್ಕಳು, ದತ್ತಕ, ಮಗಳಮಗ, ಇತರ ಸಾಕುಮಗ ಮುಂತಾದ ಗೌಣಪುತ್ರರು, ಸಹೋದರ ಪುತ್ರರೂ, ಸಹೋದರರೂ, ಜ್ಞಾತಿಗಳೂ, ಅಥವಾ ಅನುಬಂಧಿಗಳೂ, ಪುರೋಹಿತರೂ, ಅಧಿಕಾರಿಗಳು. ಪುತ್ರ ಶಬ್ದದ ವಿವರಣೆಯನ್ನು ಹಿಂದೆ ತಿಳಿಸಿದೆ.

## – ಪಿತೃಗಳು –

ಪಿತೃಗಳೆಂದರೆ ಪಿತೃದೇವತೆಗಳೆಂದರ್ಥ. ಪಿತೃದೇವತೆಗಳಲ್ಲಿ ದೇವ ಪಿತೃಗಳೂ ಮಾನಷ್ಯಪಿತೃಗಳೂ ಇದ್ದಾರೆ.

ವಿಭ್ರಾಜರೂ, ಅಗ್ನಿಷ್ವಾತ್ತರೂ, ಬರ್ಹಿಷದರೂ, ಅಮೂರ್ತ ಪಿತೃಗಳು, ಇವರು ಸ್ವಾಧೀನ ಸಿದ್ಧಿಯುಳ್ಳವರು. ಹಾಗೂ ಸ್ವಯಂ ಸಿದ್ಧರು. ಇವರು ಪರಮಶ್ರೇಷ್ಠರು. ಇವರು ದೇವತೆಗಳಿಗೆ ಪಿತೃಗಳು. ಸುಕಾಲರೂ, ಅಂಗಿರಸರೂ, ಸುಸ್ವಧರೂ, ಸೋಮಪರೂ, ಮೂರ್ತ ಪಿತೃಗಳು. ಇವರು ವಿಧಿವಿಹಿತ ಅಗ್ನಿಹೋತ್ರಾದಿ ಯಜ್ಞಯಾಗಗಳನ್ನು ಮಾಡಿ, ತತ್ಫಲವಾಗಿ ದೇವತ್ವವನ್ನು ಪಡೆದವರು. ಇವರು ಮಾನವರಿಗೆ ಪಿತೃದೇವತೆಗಳು. ಇವರಲ್ಲಿ ಬ್ರಾಹ್ಮಣರಿಗೆ, ಸುಕಾಲರೂ, ಕ್ಷತ್ರಿಯರಿಗೆ ಅಂಗಿರಸರೂ, ವೈಶ್ಯರಿಗೆ ಸುಸ್ವಧರೂ, ಶೂದ್ರರಿಗೆ ಸೋಮಪರೂ ಪಿತೃದೇವತೆಗಳೆಂದು, ಹರಿವಂಶ ಪುರಾಣದಲ್ಲಿ ಹೇಳಿದೆ. ಪಿತೃಗಳ ವಿಷಯದಲ್ಲಿ ಪುರಾಣಗಳಲ್ಲಿ ವಿಭಿನ್ನಾಭಿಪ್ರಾಯವಿದೆ.

ಸೃಷ್ಟಿಯ ಪೂರ್ವದಲ್ಲಿ ಹಿರಣ್ಯಗರ್ಭ ಬ್ರಹ್ಮನು ದೇವತೆಗಳನ್ನು ಸೃಷ್ಟಿ ಮಾಡಿ, ಅವರಿಗೆ ಕರ್ತವ್ಯಗಳನ್ನು ವಿಧಿಸಿ, ಸಕಲ ಭೋಗ ಸಾಮಗ್ರಿಗಳನ್ನು ಸೃಷ್ಟಿಸಿ, ಕರ್ತವ್ಯೋನ್ಮುಖರಾಗುವಂತೆ ವಿಧಿಸಿದನು. ದೇವತೆಗಳೆಲ್ಲರೂ ಕೆಲವು ಕಾಲ ಕರ್ತವ್ಯನಿಷ್ಠರಾಗಿದ್ದು, ಕಾಲಕ್ರಮೇಣ ಭೋಗ್ಯ ವಸ್ತುಗಳಿಗೆ ಪರವಶರಾಗಿ, ಕರ್ತವ್ಯ ವಿಮುಖರಾದರು. ಆಗ ಅದನ್ನು ಗಮನಿಸಿದ ಹಿರಣ್ಯಗರ್ಭನು ಕೋಪದಿಂದ "ನಿಮ್ಮ ಪ್ರಜ್ಞೆ ನಾಶವಾಗಲಿ, ವಿಮೂಢರಾಗಿರಿ", ಎಂದು ಶಪಿಸಿದನು. ಆಗ ಅವರು ಪುನಃ ಬ್ರಹ್ಮನನ್ನೇ ಮರೆಹೊಕ್ಕರು. ಆಗ ಬ್ರಹ್ಮನು, ಶಾಪವಿಮೋಚನೆಯ ಮಾರ್ಗವನ್ನು 'ನಿಮ್ಮ ಮಕ್ಕಳಾದ ಪಿತೃದೇವತೆಗಳಿಂದ ಪಡೆಯಿರಿ' ಎಂದು ಹೇಳಿಕಳುಹಿಸಿದನು. ಆಗ ಪಿತೃಗಳಲ್ಲಿ ಬಂದು, ವಿಮೋಚನೆಯ ಉಪಾಯವನ್ನು ಪ್ರಶ್ನಿಸಿದಾಗ, ಅವರು "ಮಕ್ಕಳಿರಾ, ಎಂದು ಸಂಬೋಧಿಸಿ, ಉತ್ತಮ ತತ್ವಜ್ಞಾನವುಂಟಾಗುವಂತೆ ಬೋಧಿಸಿದರು. ಇದರಿಂದ ದೇವತೆಗಳು ವಿವೇಕ ಸಂಪನ್ನರಾದರೂ ಸಹ, ಪಿತೃಗಳು ತಮ್ಮನ್ನು "ಪುತ್ರಾಃ" ಎಂದು ಸಂಬೋಧಿಸಿದರಲ್ಲಾ! ಎಂಬ ಖೇದದಿಂದ ಪುನಃ ಬ್ರಹ್ಮನಲ್ಲಿ ವಿಜ್ಞಾಪಿಸಿಕೊಂಡರು. ಆಗ ಬ್ರಹ್ಮನು ನೀವು ಅವರಿಗೆ ಜನ್ಮಕೊಟ್ಟ ನಿಮಿತ್ತದಿಂದ ಪಿತೃಗಳೆನಿಸಿದ್ದೀರಿ. ಅವರು ನಿಮಗೆ ತತ್ವಜ್ಞಾನ ರೂಪವಾದ ಶರೀರವನ್ನು ಕೊಟ್ಟುದುದರಿಂದ, ಅವರು ನಿಮಗೆ ಪಿತೃಗಳು. ಹೀಗೆ ಪರಸ್ಪರ ಇಬ್ಬರೂ ಪಿತೃಗಳು. ಎಂದು ಸಮಾಧಾನ ಮಾಡಿಕಳುಹಿಸಿದನು.

"ತ ಏತೇ ಪಿತರೋ ದೇವಾ ದೇವಾಶ್ಚ ಪಿತರಸ್ತಥಾ।

ಅನ್ಯೋನ್ಯಂ ಪಿತರೋ ಹ್ಯೇತೇ ದೇವಾಶ್ಚ ಪಿತರಸ್ತಥಾ॥

ಎಂದು ಹರಿವಂಶದಲ್ಲಿ ವಿವರಿಸಿದ್ದಾರೆ.

ಈ ಪಿತೃಗಳ ಗುಂಪಿಗೆ ವಿಶ್ವೇದೇವ ದೇವತೆಗಳೂ, ವಸುರುದ್ರ ಆದಿತ್ಯರೂ, ಸೇರಿರುತ್ತಾರೆ. ದಕ್ಷ ಬ್ರಹ್ಮನ ಮಗಳಾದ ವಿಶ್ವಾ ಎಂಬವಳಲ್ಲಿ ಧರ್ಮನಿಂದ ಜನಿಸಿದ ಹದಿಮೂರು ದೇವತೆಗಳಿಗೆ ವಿಶ್ವೇದೇವ ದೇವತೆಗಳೆಂದು ಹೆಸರು.

## ವಿಶ್ವೇದೇವ ದೇವತೆಗಳ ವಿವರ

ಅ) ಸತ್ಯ-ವಸು- ನಾಂದಿಗೂ,

ಆ) ಪುರೂರವ-ಆರ್ದ್ರವ-ಪಾರ್ವಣಶ್ರಾದ್ಧಕ್ಕೂ

ಇ) ಧುರಿ–ವಿಲೋಚನ–ತೀರ್ಥಶ್ರಾದ್ಧಕ್ಕೂ

ಈ) ಕಾಮ–ಕಾಲ–ಸಪಿಂಡೀಕರಣಕ್ಕೂ

ಉ) ಕ್ರತು–ದಕ್ಷ–ಕಾಮ್ಯಶ್ರಾದ್ಧಕ್ಕೂ

ಊ) ಧನು–ರುಚಿ–ಹಿರಣ್ಯಶ್ರಾದ್ಧಕ್ಕೂ

ಋ) ರುದ್ರ–ಏಕೋದ್ದಿಷ್ಟಕ್ಕೂ ವಿಹಿತರಾಗಿದ್ದಾರೆ.

ಆಯಾ ಶ್ರಾದ್ಧಕ್ಕೆ ಕ್ಲುಪ್ತರಾದ ವಿಶ್ವೇದೇವದೇವತೆಗಳು ಆಯಾ ಪಿತೃಗಳನ್ನು ಜೊತೆಯಲ್ಲಿ ಕರೆದುಕೊಂಡು ಬರುವರೆಂದೂ ಹೋಗುವಾಗ ಪಿತೃಗಳು ಮುಂದೆಯೂ, ವಿಶ್ವೇದೇವ ದೇವತೆಗಳು ಹಿಂದೆಯೂ ಹೋಗುವರೆಂದೂ ಹೇಳಿದ್ದಾರೆ. ವಸುರುದ್ರಾದಿತಿ ಸುತಾಃ ಪಿತರಃ ಶ್ರಾದ್ಧ ದೇವತಾಃ! ಪ್ರೀಣಯಂತಿ ಮನುಷ್ಯಾಣಾಂ ಪಿತೄನ್ ಶ್ರಾದ್ಧೇನ ತರ್ಪಿತಾಃ॥ . ಆಯುಃ ಪ್ರಜಾಂ ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ। ಪ್ರಯಚ್ಛಂತಿ ತಥಾ ರಾಜ್ಯಂ ಪ್ರೀತಾ ನೃಣಾಂ ಪಿತಾಮಹಾಃ॥ (ಯಾಜ್ಞವಲ್ಕ್ಯ ಸ್ಮೃತಿ)

ಪಿತೃಗಳೆಂದರೆ ನಮ್ಮನ್ನು ಸಾಕಿ, ಸಲುಹಿ, ಈಗ ನಮ್ಮಿಂದ ಅಗಲಿರುವವರೇ, ಎಂದು ತಿಳಿಯಬಾರದು. ಈ ಅವರು ಈಗ ಪಿತೃದೇವತೆಗಳು, ಅವರು ಅಧಿಕಾರಿಗಳು ಆಚರಿಸಿದ ಅಂತ್ಯೇಷ್ಟಿಯಿಂದ ದೇವತಾತ್ವವನ್ನು ಪಡೆದಿರುತ್ತಾರೆ. ಅವರಿಗೆ ವಿಶೇಷವಾದ ಶಕ್ತಿಯೂ ಲಭಿಸಿರುತ್ತದೆ. ಅವರಿಗೆ ತಮ್ಮ ಕುಟುಂಬದವರನ್ನು ಅನುಗ್ರಹಿಸಲು, ಹಾಗೂ ನಿಗ್ರಹಿಸಲು ಸಾಮರ್ಥ್ಯವುಂಟು. ನಮ್ಮ ಸಕಲ ವಿಧವಾದ ಐಹಿಕ, ಆಮುಷ್ಮಿಕ ಸಂಪತ್ತನ್ನೂ ಅನುಗ್ರಹಿಸುವ ಶಕ್ತಿ ಲಭಿಸಿರುತ್ತದೆ. ಉದಾಹರಣೆಗೆ ಒಬ್ಬ ವ್ಯಕ್ತಿಯನ್ನು ದೇವದತ್ತ ಎನ್ನುತ್ತೇವೆ. ಆ ಹೆಸರು ಅವನ ಶರೀರಕ್ಕಲ್ಲ, ಅವನ ಜೀವಕ್ಕೂ ಅಲ್ಲ. ಜೀವದೊಡಗೂಡಿದ ಶರೀರವನ್ನೇ ದೇವದತ್ತ ಎಂದು ಕರೆಯುವುದು. ಹಾಗೆಯೇ ವಸುದೇವತೆಯೊಡಗೂಡಿದ ಗತಿಸಿದ ಪಿತೃವನ್ನೂ, ರುದ್ರನೊಡಗೂಡಿದ ಪಿತಾಮಹರನ್ನೂ, ಆದಿತ್ಯನೊಡಗೂಡಿದ ಪ್ರಪಿತಾಮಹರನ್ನೂ, ಪಿತೃದೇವತೆ ಗಳೆಂದು ಶಾಸ್ತ್ರವು ಘೋಷಿಸುತ್ತಿದೆ. ಆದುದರಿಂದ, ವಸು–ರುದ್ರ–ಆದಿತ್ಯರೇ, ಅಧಿಷ್ಠಾತೃದೇವತೆಗಳು. ಪುತ್ರಾದಿ ಅಧಿಕಾರಿಗಳು ವಿಹಿತ ಕಾಲಗಳಲ್ಲಿ ಪಿತ್ರಾದಿಗಳನ್ನು ಉದ್ದೇಶಿಸಿ, ಅವರ ಹೆಸರು, ಗೋತ್ರ, ರೂಪ ಇವುಗಳನ್ನು ಹೇಳಿ ಕೊಟ್ಟ ಅನ್ನಾದಿಗಳಿಂದ, ಆ ಅಧಿಷ್ಠಿತ ವಸ್ವಾದಿ ದೇವತೆಗಳು

ಸಂತೃಪ್ತರಾಗಿ, ಬೇರೆ ಬೇರೆ ಯೋನಿಯಲ್ಲಿ ಅವರವರ ಕರ್ಮಕ್ಕೆ ಅನುಗುಣವಾಗಿ ಜನಿಸಿರುವ ಮೃತರಿಗೆ, ಶ್ರದ್ಧೆಯಿಂದ ಕೊಟ್ಟದ್ದನ್ನು ಅವರವರಿಗೆ ಅರ್ಹವಾದ ಆಹಾರವನ್ನಾಗಿ ಪರಿವರ್ತಿಸಿ, ಅವರಿಗೆ ತಲುಪಿಸಿ, ಅವರನ್ನೂ ತೃಪ್ತಿಗೊಳಿಸಿ, ಶ್ರಾದ್ಧ ಕರ್ತೃಗಳಿಗೆ ಆಯುಸ್ಸು, ಸಂತತಿ, ಧನ, ವಿದ್ಯೆ, ಸ್ವರ್ಗ, ಮೋಕ್ಷ ಮುಂತಾದ ಸುಖಗಳನ್ನೂ ಅನುಗ್ರಹಿಸುತ್ತಾರೆ. ಹೇಗೆ ಗರ್ಭಿಣಿಯು ಪತಿಯಿಂದ ತನ್ನ ಬಯಕೆಯನ್ನು ಈಡೇರಿಸಿಕೊಂಡು, ತಾನು ತೃಪ್ತಳಾಗಿ, ಪತಿಯನ್ನೂ ಸಂತೋಷಪಡಿಸಿ, ತನ್ನ ಗರ್ಭಸ್ಥ ಶಿಶುವನ್ನೂ ಸಂತೋಷಪಡಿಸುವಳೋ, ಹಾಗೆ, ವಸ್ವಾದಿಗಳು ಸಂತೋಷ ಪಡಿಸುತ್ತಾರೆಂದು ಯಾಜ್ಞವಲ್ಕ್ಯ ಸ್ಮೃತಿ ವ್ಯಾಖ್ಯಾನದಲ್ಲಿ ವಿವರಿಸಿರುತ್ತಾರೆ.

ಪರೇತನ ಪಿತರಃ ಸ್ತೋಮ್ಯಾಸೋ ಗಂಭೀರೇಭಿಃ ಪ್ರಥಿಭಿಃ ಪೂರ್ವಿಣೇಭಿಃ।
ದತ್ತಾಯಾಸ್ಮಭ್ಯಂ ದ್ರವಿಣೇಹ ಭದ್ರಂ ರಯಿಂಚ ನ ಸ್ಸರ್ವವೀರಂ ನಿಯಚ್ಛತ।

"ಪಿತೃಗಳೇ, ನೀವು ಸೌಮ್ಯರಾಗಿ, ನಮ್ಮ ಹವಿರ್ಭಾಗಗಳನ್ನು ಸ್ವೀಕರಿಸಿ, ನಮಗೆ ಐಹಿಕ ಸಕಲ ಸಮೃದ್ಧಿಯನ್ನೂ, ವೀರ ಪುತ್ರರನ್ನೂ ಅನುಗ್ರಹಿಸಿ, ನಿಮ್ಮ ಪೂರ್ವಿಕರ ಉತ್ತಮ ಮಾರ್ಗಗಳಲ್ಲಿ ಹೋಗಿ ಬನ್ನಿರಿ" ಎಂಬುದಾಗಿ ಪ್ರಾರ್ಥಿಸಲಾಗಿದೆ.

ಕರ್ತೃಗಳು ವಿಧ್ಯುಕ್ತವಾಗಿ ಪಿತೃಗಳನ್ನು ಉದ್ದೇಶಿಸಿ ಸಮರ್ಪಿಸಿದ ಅನ್ನಾದಿಗಳು ವಿವಿಧಯೋನಿಗಳಲ್ಲಿ ಜನಿಸಿದ ಪಿತೃಗಳಿಗೆ ತಲುಪುವ ಬಗ್ಗೆ ಪರಾಶರ ಸ್ಮೃತಿಯಲ್ಲಿ

("ಅಗ್ನೌಹುತಂ ತು ದೇವಸ್ಥಾಃ ಸ್ವರ್ಗಸ್ಥಾಃ ವಿಪ್ರಭೋಜನೇ)

ಯಮಸ್ಥಾಃ ಪಿಂಡದಾನೇನ ನಾರಕ್ಯಾಂ ವಿಕಿರೇಣ ತು॥

ಊರ್ಜಂ ವಹಂತು ತಿರ್ಯಕ್‌ಸ್ಥಾಃ ರಾಕ್ಷಸಾ ಭೂರಿಭೋಜನೇ

ಋಷಿಸ್ಥಾ ದಕ್ಷಿಣಾದಾನೇ ಶ್ರಾದ್ಧಂ ಸಪ್ತ ವಿಧಮ್‌ಸ್ಮೃತಮ್॥

ವಾಯುಪುರಾಣದಲ್ಲಿ

"ಯಥಾಗೋಷ್ಠೇ ಪ್ರಣಷ್ಟಾಂ ವೈ ವತ್ಸೋ ವಿಂದೇತ ಮಾತರಮ್।

ತಥಾ ತಂ ನಯತೇ ಮಂತ್ರಃ ಜಂತುರ್ಯತ್ರಾವತಿಷ್ಠತೇ॥

ನಾಮ ಗೋತ್ರಂ ಚ ಮಂತ್ರಶ್ಚ ದತ್ತಮನ್ನಂ ನಯಂತಿ ತಮ್।

ಅಪಿಯೋನಿ ಶತಂ ಪ್ರಾಪ್ತಾನ್ ತೃಪ್ತಿಸ್ತಾನನುಗಚ್ಛತಿ।

ದರ್ಶನ ಧ್ಯಾನ ಸಂಸ್ಪರ್ಶಾತ್ ಮತ್ಸೀ ಕೂರ್ಮೀ ಚ ಪಕ್ಷಿಣಃ॥

ಯಥಾತೇ ತೃಪ್ತಿಮಾಯಾಂತಿ ಶ್ರಾದ್ಧೇನ ಪಿತರಸ್ತಥಾ।

ನಾಮ ಗೋತ್ರಂ ಪಿತೄಣಾಂ ತು ಪ್ರಾಪಕಂ ಹವ್ಯಕವ್ಯಯೋಃ॥''

ಕೊಟ್ಟಿಗೆಯಿಂದ ದೂರ ಹೋಗಿರುವ ಹಸುವನ್ನು ಅದರ ಕರುವು ಹೇಗೆ ಹುಡುಕಿ ಕೊಂಡು ಹೋಗಿ ಸೇರುವುದೋ, ಹಾಗೆ ಪಿತೃಗಳ ಸಂಬಂಧ, ಹೆಸರು, ಗೋತ್ರ, ರೂಪಗಳನ್ನು ಕ್ರಮವಾಗಿ ಹೇಳಿ ಮಂತ್ರ ಪುರಸ್ಸರವಾಗಿ ಕರ್ತೃಗಳು ಕೊಟ್ಟ, ಅನ್ನಾದಿಗಳು-ಮಂತ್ರ ಪ್ರಭಾವದಿಂದಲೂ, ವಸ್ತ್ರಾದಿಗಳ ಪ್ರಭಾವ ದಿಂದಲೂ, ಅವರವರಿಗೆ ತಲುಪಿ, ಕರ್ತೃಗಳು ಶ್ರೇಯೋ ಭಾಜನರಾಗುತ್ತಾರೆ. ಪಾರ್ವಣಶ್ರಾದ್ಧದಲ್ಲಿ ಮಾಡಿದ ಪಾಣಿ ಹೋಮದಿಂದ ದೇವತೆಗಳೂ, ಯಮನ ವಶದಲ್ಲಿರುವವರು ಪಿಂಡದಾನದಿಂದಲೂ, ವಿಪ್ರಭೋಜನದಿಂದ ಸ್ವರ್ಗವಾಸಿ ಗಳೂ, ವಿಕಿರದಿಂದ ನಾರಕಿಗಳೂ, ತರ್ಪಣದಿಂದ, ತಿರ್ಯಕ್‌ರೂಪದಲ್ಲಿ ರುವವರೂ, ಭೂರಿ ಭೋಜನದಿಂದ ರಾಕ್ಷಸಯೋನಿ ಯಲ್ಲಿರುವವರೂ, ದಕ್ಷಿಣಾದಾನದಿಂದ ಋಷಿರೂಪದಲ್ಲಿರುವವರೂ, ತೃಪ್ತರಾಗುತ್ತಾರೆಂದು ವಿವರಿಸಿರುತ್ತಾರೆ. ಮೀನು ತನ್ನ ತಾಯಿ ಮೀನನ್ನು ನೋಡಿದ ಮಾತ್ರದಿಂದಲೂ, ಆಮೆಯ ಮರಿಯು ತಾಯಿಯನ್ನು ಧ್ಯಾನಮಾತ್ರದಿಂದಲೂ, ಪಕ್ಷಿಗಳ ಮರಿಗಳು ತನ್ನ ತಾಯಿಯ ಸ್ಪರ್ಶಮಾತ್ರದಿಂದಲೂ ತೃಪ್ತಿಪಡುವಂತೆ, ಕರ್ತೃಗಳು ಆಚರಿಸಿದ ಶ್ರಾದ್ಧದಿಂದ ಪಿತೃಗಳು ಸಂತೃಪ್ತರಾಗಿ ಹರಸುತ್ತಾರೆ. ನಾವು ಆಚರಿಸುವ ಸಕಲ ಕರ್ಮಗಳಲ್ಲಿಯೂ, ಪಿತೃದೇವತೆಗಳ ಸಂಬಂಧವು ಇದ್ದೇ ಇರುತ್ತದೆ. ವಿವಾಹ-ಉಪನಯನಾದಿ ಶುಭಕರ್ಮಗಳಲ್ಲಿ ಪಿತೃಗಳು ನಾಂದೀಮುಖರು. ಅಲ್ಲಿ ದೇವತೆಗಳೇ ಪ್ರಧಾನರು, ನಾಂದೀಮುಖರಾದ ಪಿತೃಗಳು ಗೌಣರು. ಶ್ರಾದ್ಧಾದಿಗಳಲ್ಲಿ ಪಿತೃಗಳೇ, ಪ್ರಧಾನರು. ವಿಶ್ವೇದೇವಾದಿ ದೇವತೆಗಳು ಗೌಣರು.

''ಹೃಷ್ಯಂತಿ ಪಿತರಶ್ಸ್ಮೃತ್ವಾ ಶ್ರಾದ್ಧಕಾಲ ಮುಪಸ್ಥಿತಮ್।

ಅನ್ಯೋನ್ಯಂ ಮನಸಾ ಧ್ಯಾತ್ವಾ ಸಂಪತಂತಿ ಮನೋಜವಮ್॥

ಬ್ರಾಹ್ಮಣೈಸ್ಸಹ ಚಾಶ್ನಂತಿ ಪಿತರೋಹ್ಯಂತರಿಕ್ಷಗಾಃ।

ವಾಯುಭೂತಾಶ್ಚ ತಿಷ್ಠಂತಿ ಭುಕ್ತ್ವಾ ಯಾಂತಿ ಪರಾಂ ಗತಿಮ್।

ನಿಮಂತ್ರಿತಾಸ್ತು ಯೇ ವಿಪ್ರಾಃ ಶ್ರಾದ್ಧ ಪೂರ್ವದಿನೇ ಖಗ।

ಪ್ರವಿಶ್ಯ ಪಿತರಸ್ತೇಷು ಭುಕ್ತ್ವಾ ಯಾಂತಿ ಸ್ವಮಾಲಯಮ್।

ಪ್ರಭಾವಿತರೂ ಶಕ್ತಿ ಸಂಪನ್ನರೂ ಆದ ಪಿತೃದೇವತೆಗಳಿಗೆ ಶ್ರಾದ್ಧ ಸಮಯವು ತಾನೇ ವೇದ್ಯವಾಗುತ್ತದೆ. ಕೂಡಲೇ ಅವರು ಪರಸ್ಪರ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು, ಶ್ರಾದ್ಧ ಕರ್ತೃಗಳಿಂದ ನಿಮಂತ್ರಿತರಾದ ಬ್ರಾಹ್ಮಣರಲ್ಲಿ ಹಿಂದಿನ ದಿನವೇ ವಾಯುರೂಪದಿಂದ ಬಂದು ಸೇರಿಕೊಳ್ಳುತ್ತಾರೆ. ಶ್ರಾದ್ಧದಂದು ಕರ್ತೃಗಳು ಕೊಟ್ಟ ಅನ್ನಾದಿಗಳನ್ನು ಬ್ರಾಹ್ಮಣರೂಪದಿಂದ ಭುಂಜಿಸಿ, ತಮ್ಮ ತಮ್ಮ ಪೂರ್ವ ಸ್ಥಾನಗಳಿಗೆ ಹಿಂತಿರುಗುತ್ತಾರೆ.

ಶ್ರಾದ್ಧ ಕರ್ತನು ಪಿತೃಸ್ಥಾನಕ್ಕೆ ಒಬ್ಬ ವಿಪ್ರನನ್ನು ನಿಮಂತ್ರಿಸಿದ್ದರೆ, ಆ ಬ್ರಾಹ್ಮಣನ ಉದರ ಸ್ಥಾನದಲ್ಲಿ ಪಿತೃವಿದ್ದಾರೆಂದೂ, ಎಡಪಾರ್ಶ್ವದಲ್ಲಿ ಪಿತಾಮಹರಿದ್ದಾರೆಂದು ಬಲಪಾರ್ಶ್ವದಲ್ಲಿ ಪ್ರಪಿತಾಮಹರಿದ್ದಾರೆಂತಲೂ ತಿಳಿಯಬೇಕು. ಶ್ರೀರಾಮನು ವನವಾಸ ಸಂದರ್ಭದಲ್ಲಿ ದಶರಥನ ಶ್ರಾದ್ಧ ಮಾಡಿದಾಗ, ಜಾನಕಿಯು ಪಿತೃಸ್ಥಾನದ ವಿಪ್ರನಲ್ಲಿ ಮೂವರನ್ನೂ ಸಾಕ್ಷಾತ್ಕರಿಸಿದಳೆಂದು ಶಿವಪುರಾಣದಲ್ಲಿ ಹೇಳಿದೆ.

ಮತ್ತೇನೆಂದರೆ ಇದು ಒಂದು ಸ್ವಾರಸ್ಯವಾದ ವಿಷಯ–

ಶ್ರಾದ್ಧಕಾಲೇ ಯಮಃ ಪ್ರೇತಾನ್ ಪಿತೄಂಶ್ಚಾಪಿ ಯಮಾಲಯಾತ್।

ವಿಸರ್ಜಯತಿ ಮಾನುಷ್ಯೇ ನಿರಯಸ್ಥಾಂಶ್ಚ ಕಾಶ್ಯಪ।

ಕ್ಷುಧಾರ್ತಾಃ ಕೀರ್ತಯಂತಶ್ಚ ದುಷ್ಕೃತಂ ಚ ಸ್ವಯಂ ಕೃತಮ್।

ಕಾಂಕ್ಷಂತಿ ಪುತ್ರಪೌತ್ರೇಭ್ಯಃ ಪಾಯಸಂ ಮಧು ಸಂಯುತಮ್।

ತಸ್ಮಾತ್ತಾಂಸ್ತತ್ರ ವಿಧಿನಾ ತರ್ಪಯೇತ್ ಪಾಯಸೇನ ತು॥

ಮೃತರಿಗೆ ಅಂತ್ಯಕರ್ಮವಾಗದಿದ್ದಲ್ಲಿ ಅವರಿಗೆ ವಾಯುರೂಪ ತಪ್ಪಿದ್ದಲ್ಲ. ಅಂತ್ಯಕರ್ಮವು ಸಮರ್ಪಕವಾಗಿ ಆಗಿದ್ದರೆ, ಅವರು, ಪಿತೃದೇವತಾ ರೂಪವನ್ನು ಪಡೆದು ತಮ್ಮ ಕರ್ಮಕ್ಕೆ ಅನುಗುಣವಾಗಿ, ಪಿತೃಲೋಕದಲ್ಲಿರಬಹುದು. ಅಥವಾ

ನರಕಗಳಲ್ಲಿ ಕರ್ಮಫಲಗಳನ್ನು ಅನುಭವಿಸುತ್ತಿರಬಹುದು. ಅಂತ್ಯಕರ್ಮವು ಆಗಿಲ್ಲದಿದ್ದರೆ ವಾಯುರೂಪ ದಿಂದಲೇ ಕ್ಲೇಶಗಳನ್ನು ಅನುಭವಿಸುತ್ತಿರಬಹುದು. ಶ್ರಾದ್ಧಕಾಲ ಬಂದಿತೆಂದರೆ, ಶ್ರಾದ್ಧದೇವನಾದ ಯಮಧರ್ಮರಾಜನು, ಅವರೆಲ್ಲರನ್ನೂ "ನಿಮ್ಮ ನಿಮ್ಮ ಮನೆಗಳಿಗೆ ಹೋಗಿ, ಪುತ್ರಾದಿ ಅಧಿಕಾರಿಗಳು ಕೊಡುವ ಅನ್ನಾದಿಗಳನ್ನು ಅನುಭವಿಸಿಕೊಂಡು ಬನ್ನಿರಿ" ಎಂದು ಕಳುಹಿಸುತ್ತಾನೆ. ಅವರು ತಮ್ಮ ಹಿಂದಿನ ದುಷ್ಕೃತ್ಯಗಳನ್ನು ನಿಂದಿಸಿಕೊಳ್ಳುತ್ತಾ, ಮಕ್ಕಳು ಏನಾದರೂ ಕೊಡಬಹುದೆಂದು ಆಶೆಯಿಂದ ಬಂದು, ಮಕ್ಕಳು ಕೊಡುವ ಮಧು, ಪಾಯಸಾದಿಗಳನ್ನು ಭುಂಜಿಸಿ ಅವರನ್ನು ಹರಸಿ, ಹಿಂತಿರುಗುತ್ತಾರೆ. ಏನೂ ದೊರೆಯದಿದ್ದಲ್ಲಿ ಶಪಿಸಿ, ಹಿಂತಿರುಗು ತ್ತಾರೆಂದೂ, ಮಹಾ ಗರುಡ ಪುರಾಣದಲ್ಲಿ ತಿಳಿಸಿರುತ್ತಾರೆ. ಆದುದರಿಂದ ಅಮಾವಾಸ್ಯಾದಿ ಪರ್ವಕಾಲಗಳಲ್ಲಿಯೂ, ಶ್ರಾದ್ಧ ತಿಥಿಯಂದೂ, ತೀರ್ಥ ಕ್ಷೇತ್ರಗಳಲ್ಲಿಯೂ, ಪಿತೃಕಾರ್ಯಗಳನ್ನು ಸಮರ್ಪಕವಾಗಿ ನೆರವೇರಿಸಿ ಕೃತಾರ್ಥರಾಗಬೇಕಾದುದು ಅತ್ಯಗತ್ಯವಾದುದು. ಅತ್ಯಂತ ಆಪತ್ಕಾಲದಲ್ಲಿ, ಆಮಶ್ರಾದ್ಧ, ಸಂಕಲ್ಪಶ್ರಾದ್ಧ, ಹಿರಣ್ಯ ಶ್ರಾದ್ಧವನ್ನಾದರೂ ಮಾಡಿ ಕೃತಾರ್ಥರಾಗಬೇಕು. "ಅತ್ಯಂತಾಪದಿತು ಅಪಿವಾ ಹಿರಣ್ಯೇನ ಪ್ರದಾನಮಾತ್ರಂ, ಅಪಿವಾ ಮೂಲ ಫಲೈ: ಪ್ರದಾನಮಾತ್ರಂ" ಇತಿ ಬೋಧಾಯನ: ; ಅತ್ಯಂತ ಕಷ್ಟಕಾಲದಲ್ಲಿ ಹಿರಣ್ಯದಾನ ಅಥವಾ ಆಮದ್ರವ್ಯ ಮತ್ತು ಹಣ್ಣುಗಳನ್ನು ಕೊಡಬಹುದೆಂದು ಬೋಧಾಯನರ ಅಭಿಪ್ರಾಯ. ಈ ಪುಸ್ತಕದಲ್ಲಿ ಋಗ್ವೇದಿಗಳಿಗೆ ಉಪಯುಕ್ತವಾದ ಪಾರ್ವಣ ಶ್ರಾದ್ಧ ಅಥವಾ ಪ್ರತಿ ಸಾಂವತ್ಸರಿಕ ಮೃತಾಹಾನ್ನಶ್ರಾದ್ಧ ಪ್ರಯೋಗವನ್ನು ಮುದ್ರಿಸಲಾಗಿದೆ. "ಮಾಸಿಕಂ ಪಾರ್ವಣಂ ಪ್ರೋಕ್ತಂ ಅಶಕ್ತನಾಂತು ವಾರ್ಷಿಕಮ್" ಎಂಬ ವಚನದಂತೆ ಪ್ರತಿವರ್ಷವೂ ಮೃತರ ತಿಥಿಯಂದು ಮಾಡಬೇಕಾದ ಅನ್ನ ಶ್ರಾದ್ಧದ ಪ್ರಯೋಗವನ್ನು ಬರೆಯಲಾಗಿದೆ. ಇದಕ್ಕೆ ಪಿಂಡಪಿತೃಯಜ್ಞವೆ ಪ್ರಕೃತಿ. ಯಾಜುಷರಿಗೆ ಮಾಸಿಶ್ರಾದ್ಧವೇ ಪ್ರಕೃತಿ. ಈ ಪಾರ್ವಣ ಶ್ರಾದ್ಧದಲ್ಲಿ ಪಿಂಡಪಿತೃಯಜ್ಞದ ಅಂಶಗಳು, ಮಾಸಿ ಶ್ರಾದ್ಧದ ವಿಷಯಗಳೂ, ಕೆಲವು ಪೌರಾಣಿಕ ಹಾಗೂ ಗೃಹ್ಯೋಕ್ತ ವಿಷಯಗಳೂ ಸೇರಿ ಸಂಪನ್ನವಾಗಿದೆ. ಈ ಪ್ರಯೋಗವು ಅನಗ್ನಿಕರಾದ ದ್ವಿಜರಿಗಾಗಿ ಮೀಸಲಾದುದು. ಈ ಕಾಲದಲ್ಲಿ ಅನಗ್ನಿಕರೇ ಹೆಚ್ಚು. ಇದು ತಪ್ಪದೇ ಮಾಡಲೇಬೇಕಾದ ಕರ್ಮ. ಇದರ ಪರಮ ಪ್ರಯೋಜನಗಳೆಂದರೆ, ಪಿತೃಗಳ ಪ್ರಸನ್ನತೆ, ಆಯುಷ್ಯ, ಸಂತತಿ,

ಐಶ್ವರ್ಯ, ವಿದ್ಯೆ ಐಹಿಕಾಮುಷ್ಮಿಕ ಸುಖ. ಇವು ಪ್ರತಿಯೊಬ್ಬರಿಗೂ ಅಗತ್ಯವಾದ ಕಾರಣ ಶ್ರದ್ಧಾಭಕ್ತಿಗಳಿಂದ ಆಚರಿಸಿ ಕೃತಾರ್ಥರಾಗಬೇಕು.

ಈ ಪುಸ್ತಕದಲ್ಲಿ ಮಹಾಲಯ, ಹಿರಣ್ಯ, ಸಂಕಲ್ಪ ಶ್ರಾದ್ಧಗಳನ್ನು ಆಚರಿಸುವಾಗ, ಬಿಡಬೇಕಾದ ಹಾಗೂ ವಿಶೇಷ ವಿಷಯಗಳನ್ನು ಬೋಧಿಸುವ ಕಾರಿಕೆಗಳನ್ನು ಮಾತ್ರ ಕೊಡಲಾಗಿದೆ. ಅಲ್ಲದೆ ಯತಿಗಳ ಆರಾಧನಾ ಕ್ರಮವನ್ನೂ ಅಳವಡಿಸಲಾಗಿದೆ. ಇವೆಲ್ಲವೂ ಆನೆಯ ಹೆಜ್ಜೆಯಲ್ಲಿ ಇತರ ಎಲ್ಲ ಪ್ರಾಣಿಗಳ ಹೆಜ್ಜೆಗಳೂ ಅಡಕವಾದಂತೆ ಪಾರ್ವಣ ಶ್ರಾದ್ಧದಲ್ಲಿಯೇ ಅಡಕವಾಗಿವೆ. ಬಿಡಬೇಕಾದ ಅಂಗಗಳನ್ನು ಬಿಡಬೇಕು. ಮಹಾಲಯದಲ್ಲಿ ಸೇರಿಸಬೇಕಾದುದನ್ನು ಸೇರಿಸಿಕೊಳ್ಳಬೇಕು. ಶಬ್ದಗಳ ವಿಭಕ್ತಿಜ್ಞಾನ ಅತ್ಯಗತ್ಯ. ವಿಭಕ್ತಿಗಳನ್ನು ತಪ್ಪು ಮಾಡಿದರೆ ತಪ್ಪು ವಿಳಾಸದ ಪತ್ರದ ಸ್ಥಿತಿಯೇ ಎಂದು ಹೇಳಬೇಕಿಲ್ಲ. ಆದುದರಿಂದ ಅಕಾರಾಂತ-ರಾಮ, ನಕರಾಂತ-ಶರ್ಮನ್, ಆಕಾರಾಂತ-ರಮಾ, ಋಕಾರಾಂತ ಪಿತೃ-ಮಾತೃ ಈಕಾರಾಂತ-ಗೌರೀ ಇಷ್ಟು ಶಬ್ದಗಳ ಪ್ರಥಮಾ, ಸಂಭೋದನ, ದ್ವಿತೀಯಾ ತೃತೀಯಾ ಚತುರ್ಥೀ ಷಷ್ಠೀ ವಿಭಕ್ತಿಗಳ ರೂಪಗಳ ಪರಿಚಯ ಅಗತ್ಯವಾದುದು.

ಇನ್ನು ಮುಂದೆ ಈ ಶ್ರಾದ್ಧಪ್ರಯೋಗದಲ್ಲಿ ಬಂದಿರುವ ಒಂದೊಂದು ವಿಷಯಗಳ ಬಗ್ಗೆ ಪರಿಚಯ ಮಾಡಲಾಗುವುದು.

## – ಶ್ರಾದ್ಧಸ್ವರೂಪ –

ಪ್ರತಿವರ್ಷ ಮೃತ ತಿಥಿಯಂದು ಮಾಡುವ ಶ್ರಾದ್ಧವು ಅಮಂಗಳವಲ್ಲ. ಅಂದರೆ, ವಿವಾಹಾದಿಗಳಂತೆ ಮಂಗಳ ಕಾರ್ಯವೂ ಅಲ್ಲ. ವಿಶೇಷ ನಿಯಮಗಳನ್ನು ಕುಟುಂಬದವರು, ಕರ್ತೃಗಳು, ಭೋಕ್ತೃಗಳೂ ಪಾಲಿಸುತ್ತಾ, ವಿಶೇಷ ಶ್ರದ್ಧೆ, ಭಕ್ತಿ ಮತ್ತು ಪ್ರಾಮಾಣ್ಯ ಬುದ್ಧಿಯಿಂದ ಆಚರಿಸುವ ಒಂದು ವಿಶೇಷ ಕರ್ಮ. ಇದರಲ್ಲಿ ಪಾಣಿ ಹೋಮ, ಬ್ರಾಹ್ಮಣಭೋಜನ, ಮತ್ತು ಪಿಂಡಪ್ರದಾನ ಈ ಮೂರೂ ಮುಖ್ಯವಾದ ಕರ್ಮಗಳು. ಇವಕ್ಕೆ ಈ ಕೆಳಗೆ ವಿವರಿಸಿರುವ ವಿಷಯಗಳು ಪೂರ್ವಾಂಗಗಳು.

## – ಕ್ಷಣ ಪಡೆಯುವುದು –

ಕ್ಷಣ ಎಂದರೆ ಒಪ್ಪಿಗೆ, ಶ್ರಾದ್ಧ ಕರ್ತೃವು, ಅಥವಾ ಮಗ ಅಥವಾ ಶಿಷ್ಯನು ತಾವು ಉದ್ದೇಶಿಸಿರುವ ಬ್ರಾಹ್ಮಣರ ಬಳಿಗೆ, ಅವರ ರಾತ್ರಿ ಭೋಜನವು ಆದ

ನಂತರ ಹೋಗಿ, ಪ್ರೀತಿ ಆದರಗಳಿಂದ ಕರ್ತೃವಾದರೆ "ನಾಳೆ ನಮ್ಮ .ತೀ॥ ತಂದೆಯುವರ
(ಮಾ॥ಶ್ರೀ॥ತಾಯಿಯುವರ) ಪ್ರತಿ ವರ್ಷದ ಶ್ರಾದ್ಧವಾಗಲಿದೆ. "ತಾವು ಕೃಪೆ ಮಾಡಿ, ವಿಶ್ವೇದೇವ (ಪಿತೃ) (ವಿಷ್ಣು) ಸ್ಥಾನಕ್ಕೆ ಒಪ್ಪಿಕೊಂಡು ಅನುಗ್ರಹಿಸಬೇಕು" ಎಂದು ಭಕ್ತಿಯಿಂದ ನಿಮಂತ್ರಿಸಬೇಕು. ಮಗ ಅಥವಾ ಶಿಷ್ಯನಾದರೆ, ನಮ್ಮ ತಂದೆಯುವರು (ನಮ್ಮ ಗುರುಗಳು) ಸಂಕಲ್ಪಿಸಿರುವ ಸ್ಥಾನಕ್ಕೆ ಒಪ್ಪಿಕೊಂಡು ಕೃಪೆಯಿಟ್ಟು ಬರಬೇಕಂತೆ. ಎಂದು ವಿನಯದಿಂದ ಪ್ರಾರ್ಥಿಸಬೇಕು. ಅವರು ಒಪ್ಪಿದ ಮೇಲೆ ಕರ್ತೃವಿಗೂ ಭೋಕ್ತೃವಿಗೂ ನಿಯಮ. ಭೋಕ್ತೃ ವಿನಲ್ಲಿ ಸಂಕಲ್ಪಿಸಿದವರು ಆವಿಷ್ಟರಾಗುತ್ತಾರೆಂದು ಶಾಸ್ತ್ರವಿದೆ.

ಈ ರೀತಿಯಾದ ಪ್ರಾರ್ಥನೆಯು ಶ್ರಾದ್ಧದ ದಿನವೂ ಎರಡು ಮೂರು ಬಾರಿ ಬರುತ್ತದೆ. ಇದಕ್ಕೆ ಕ್ಷಣ ಎಂದು ಹೆಸರು. ಇದು ಶ್ರಾದ್ಧದಲ್ಲಿ ಪ್ರಯೋಗಿಸುವ ಪಾರಿಭಾಷಿಕ ಶಬ್ದ." ನಿಮಂತ್ರಣ" ಎಂಬುದೂ ಅಷ್ಟೆ. ಅತಿ ವಿಶೇಷ ಕಾರಣವಿಲ್ಲದೆ ಒಪ್ಪಿಕೊಂಡು ತಪ್ಪಿಸಿಕೊಳ್ಳಲೇಬಾರದು. ಕರ್ತೃ, ಭೋಕ್ತೃಗಳಿಗೆ ಬ್ರಹ್ಮಚರ್ಯ ನಿಯಮವನ್ನು ಹೇಳಿದ್ದಾರೆ.

## - ವಿಪ್ರರು -

ನಿಮಂತ್ರಿತ ವಿಪ್ರರು, ಕರ್ತೃವಿನ ಗೋತ್ರದವರು, 5 ತಿಂಗಳು ಗರ್ಭಿಣೀಪತಿ, ಜ್ಞಾತಿಗಳು, ಆಚಾರಹೀನರು. ಬ್ರಹ್ಮಚಾರಿಗಳು, ವಿಧುರರೂ, ಸುಲಭಕೋಪಿಗಳೂ ಆಗಿರಬಾರದು.

ಸನ್ಯಾಸಿಗಳು ಯೋಗಿವರೇಣ್ಯರೂ ಲಭಿಸಿದಲ್ಲಿ ವಿಷ್ಣುಸ್ಥಾನಕ್ಕೆ ಪರಮ ಶ್ರೇಷ್ಠರು. ಈ ಕಾಲದಲ್ಲಿ ಶಾಂತಸ್ವಭಾವದ, ಪ್ರತಿವಚನವನ್ನು ಹೇಳಲು ಅರ್ಹರಾದ ಸಂಧ್ಯಾವಂದನೆಯನ್ನಾದರೂ, ಮಾಡುವ ಗೃಹಸ್ಥರಾದ ಸತ್ಕುಲದ ವಿಪ್ರರನ್ನು ನಿಮಂತ್ರಿಸುವುದು ಸೂಕ್ತ. ನಿಮಂತ್ರಿತರು ಸಕಾಲಕ್ಕೆ ಬಾರದಿದ್ದರೆ ಶ್ರಾದ್ಧ ಘಾತುಕರೆನಿಸಿ ಕೊಳ್ಳುತ್ತಾರೆ.

"ಗೃಹಸ್ಥಾಃ ಕುಲಸಂಪನ್ನಾಃ ಪ್ರಖ್ಯಾತಾಃ ಕುಲ ಗೋತ್ರ ತಃ।

ಸ್ವದಾರ ನಿರತಾಃ ಶಾಂತಾಃ ವಿಜ್ಞೇಯಾಃ ಪಂಕ್ತಿಪಾವನಾಃ॥

ಅಸಮಾನ ಪ್ರವರಕಃ ಅಸಗೋತ್ರಸ್ತಥೈವ ಚ।

ಅಸಂಬಂಧೀ ಚ ವಿಜ್ಞೇಯೋ ಬ್ರಾಹ್ಮಣಃ ಶ್ರಾದ್ಧಸಿದ್ಧಯೇ॥

## – ವಿಪ್ರಸಂಖ್ಯೆ –

ವಿಶ್ವೇದೇವಸ್ಥಾನಕ್ಕೆ ಇಬ್ಬರು – ಪಿತೃಸ್ಥಾನಕ್ಕೆ ಮೂವರು ಎಂದು ಹೇಳಿದ್ದರೂ, ಈ ಕಾಲದಲ್ಲಿ ಒಬ್ಬೊಬ್ಬರೇ ಸಮಂಜಸವಾದುದು. ಶ್ರಾದ್ಧವಿಸ್ತರಕೂಡದು. ವಿಷ್ಣು ಸ್ಥಾನವೂ ಐಚ್ಛಿಕ.

'ದ್ವಾದೈವೇ ಪಿತೃಕೃತ್ಯೇ ತ್ರೀನ್,ಏಕೈಕಮುಭಯತ್ರ ವಾ।

ಭೋಜಯೇತ್ ಸುಸಮೃದ್ಧೋಪಿ ನಕುರ್ಯಾತ್ ಶ್ರಾದ್ಧ ವಿಸ್ತರಮ್॥

## – ಕಾಲ –

ಶ್ರಾದ್ಧಕ್ಕೆ ಅಪರಾಹ್ನವ್ಯಾಪಿಯಾದ ತಿಥಿಯೇ ಶ್ರೇಷ್ಠ. ತಿಥಿಯಂದುಘಳಿಗೆಗಳಲ್ಲಿ ಸಂದೇಹವುಂಟಾದರೆ ಬಲ್ಲವರಿಂದ ತಿಳಿದು ಆಚರಿಸಬೇಕು. ಕುತುಪಕಾಲಕ್ಕೆ ಆರಂಭಿಸಬೇಕು. ಸೂರ್ಯೋದಯ 6 ಘಂಟೆಗೆ ಆದರೆ 11-36ಕ್ಕೆ ಕುತುಪಕಾಲ

## – ಸ್ಥಳ –

ಸ್ವಗೃಹವೇ ಅತ್ಯಂತ ಶ್ರೇಷ್ಠವಾದುದು, ಬೇರೆಯವರ ಮನೆಯಲ್ಲಿ ಶ್ರಾದ್ಧ ಕರ್ಮವನ್ನು ಆಚರಿಸಿದರೆ ಆ ಮನೆಯಪಿತೃಗಳಿಗೆ ಶ್ರಾದ್ಧಫಲವು ಹೋಗುತ್ತದೆ ಎಂದು ನಿಷೇಧಿಸಿರುತ್ತಾರೆ. ಪುಣ್ಯಕ್ಷೇತ್ರಗಳಾದರೆ ದೋಷವಿಲ್ಲ. ಶ್ರೇಷ್ಠ. ಪರರ ಗೃಹದಲ್ಲಿಯೇ ಮಾಡಬೇಕಾದ ಸಂದರ್ಭದಲ್ಲಿ ನೆಲಕ್ಕೆ ಬಾಡಿಗೆಯ ರೂಪದಲ್ಲಿ ದ್ರವ್ಯದಾನ ಮಾಡಬೇಕು.

ಪರಕೀಯ ಗೃಹೇ ಯಸ್ತು ಸ್ವ ಪಿತೃನ್ ತರ್ಪಯೇದ್ಯದಿ।

ತದ್ಭೂಮಿ ಸ್ವಾಮಿನಸ್ತಸ್ಯ ಹರಂತಿ ಪಿತರೋ ಬಲಾತ್॥

ತಸ್ಮಾತ್ ಕ್ರೀತ್ವಾ ಮಹೀಂ ದತ್ವಾಸ್ವಲ್ಪಾಮಪಿ ವಿಚಕ್ಷಣಃ।

ಪಿಂಡಃ ಪಿತೃಭ್ಯೋ ದತ್ತೋ ವೈ ತಸ್ಯಾಂ ಭವತಿ ಶಾಶ್ವತಃ॥

## – ಕ್ಷೌರವಿಷಯ –

ಈ ಕಾಲದಲ್ಲಿ "ಪಕ್ಷಾ ವೈ ಮಾಸಾಃ" ಎಂಬ ಭಾವನೆಯಿಂದ ಯಾವ ದಿನಶ್ರಾದ್ಧವಿರುತ್ತದೆಯೋ ಆ ಪಕ್ಷದಲ್ಲಿ ಆ ದಿನದವರೆಗಾದರೂ ಕ್ಷೌರ ಮಾಡಿಸಬಾರದು.

"ಯನ್ಮಾಸ್ಯಂ ವಾರ್ಷಿಕಂ ಶ್ರಾದ್ಧಂ ಯಸ್ಯ ಪಿತ್ರೋರ್ಭವೇದ್ಯದಿ।

ಪ್ರಾಕ್ ಪಿಂಡದಾನಾತ್ ತನ್ಮಾಸೇ ವಪನಂ ನ ಸಮಾಚರೇತ್॥

## – ಕರ್ತೃವಿನ ಆಪತ್ಕಾಲದಲ್ಲಿ –

ಕರ್ತೃವು ಪ್ರಬಲವಾದ ರಾಜಕಾರ್ಯದಲ್ಲಿ ತೊಡಗಿದ್ದರೆ, ಕಾರಾಗಾರದಲ್ಲಿದ್ದರೆ, ಕರ್ತೃವು ಪ್ರಬಲವಾದ ರೋಗಕ್ಕೆ ಗುರಿಯಾಗಿದ್ದರೆ, ಬೇರೆಯವರಿಂದ (ಹತ್ತಿರದವಜ್ಞಾತಿ) ಮಾಡಿಸಬೇಕು.

"ರಾಜಕಾರ್ಯೇ ನಿಯುಕ್ತಸ್ಯ ಬಂಧನಿಗ್ರಹ ವರ್ತಿನಃ।

ವ್ಯಸನೇಷು ಚ ಸರ್ವೇಷು ಶ್ರಾದ್ಧಂ ವಿಪ್ರೇಣ ಕಾರಯೇತ್॥

## – ಭೋಕ್ತೃಗಳಿಗೆ ನಿಯಮ –

ಹಿಂದಿನ ರಾತ್ರಿ-ಶ್ರಾದ್ಧದಿನ ಪೂರ್ತಿ ಬ್ರಹ್ಮಚರ್ಯ ಅಗತ್ಯ. ಶ್ರಾದ್ಧದಿನ ರಾತ್ರಿಭೋಜನ, ದೂರ ಸಂಚಾರ, ಕಠಿಣ ಕಾರ್ಯಗಳು, ಸಂಧ್ಯಾ, ದಾನತೆಗೆದುಕೊಳ್ಳುವುದು, ಹವನದಲ್ಲಿ ಭಾಗವಹಿಸುವುದು, ಭೋಕ್ತೃಗಳಿಗೆ ನಿಷಿದ್ಧವಾದವುಗಳು.

"ಪುನರ್ಭೋಜನ ಮಧ್ವಾನಂ ಭಾರೋದ್ವಹನ ಮೈಥುನೇ।

ಸಂಧ್ಯಾಂ ಪ್ರತಿಗ್ರಹಂ ಹೋಮಂ ಶ್ರಾದ್ಧ ಭೋಕ್ತಾಷ್ಟ ವರ್ಜಯೇತ್॥

## – ಸಂಧ್ಯಾವಂದನೆಯ ವಿಷಯದಲ್ಲಿ ಅಪವಾದ –

ಶ್ರಾದ್ಧದಲ್ಲಿ ನಿಮಂತ್ರಿತ ಬ್ರಾಹ್ಮಣರು "ಸಾಯಂ ಸಂಧ್ಯಾಚರಣ ಯೋಗ್ಯತಾ ಸಿದ್ಧ್ಯರ್ಥಂ, ಶ್ರಾದ್ಧಭೋಜನ ನಿಮಿತ್ತಂ ಪ್ರಾಯಶ್ಚಿತ್ತಾರ್ಥಂ, ಗಾಯತ್ರ್ಯಭಿಮಂತ್ರಿತ ಜಲಂ ಪ್ರಾಶಯಿಷ್ಯೇ" ಎಂದು ಸಂಕಲ್ಪಿಸಿ, ಶ್ರಾದ್ಧ ಭೋಜನ ಮಾಡ ಮೇಲೆ ಹತ್ತು ಸಾರಿ ಅಭಿಮಂತ್ರಿಸಿದ ನೀರನ್ನು ಕುಡಿಯಬೇಕು. ನಂತರ ಸಂಧ್ಯಾದಿಗಳಿಗೆ ಅರ್ಹರಾಗುವರು.

ದಶಕೃತ್ವಃ ಪಿಬೇದಾಪಃ ಗಾಯತ್ರ್ಯಾ ಶ್ರಾದ್ಧಭುಗ್ದ್ವಿಜಃ।

ತತಃ ಸಂಧ್ಯಾಮುಪಾಸೀತ ಜಪೇಚ್ಚ ಜುಹುಯಾದಪಿ॥

## – ಕರ್ತೃ ನಿಯಮ –

ದಂತಧಾವನ, ತಾಂಬೂಲ, ತೈಲಾಭ್ಯಂಗ, ರಾತ್ರಿಭೋಜನ, ರತಿ, ಔಷಧಸೇವನೆ, ಪರಾನ್ನ ಇವುಗಳನ್ನು ತ್ಯಜಿಸಬೇಕು.

"ದಂತಧಾವನತಾಂಬೂಲೇ ತೈಲಾಭ್ಯಂಜನಭೋಜನೇ।

ರತ್ಯೌಷಧ ಪರಾನ್ನಂ ಚ ಶ್ರಾದ್ಧಕೃತ್ ಸಪ್ತ ವರ್ಜಯೇತ್॥ ನಿಮಿಂತ್ರಿತ ವಿಪ್ರರನ್ನು ಸರಿಯಾಗಿ ಆದರಿಸದಿದ್ದರೆ ಮಹಾದೋಷ

## – ಶ್ರಾದ್ಧದ ದಿನ ಬಿಡಬೇಕಾದವು –

ರಂಗವಲ್ಲೀ ಪುಷ್ಪಾಲಂಕಾರ, ವಿಭೂತಿಧಾರಣೆ, ಜಗಳ, ಅಳುವುದು, ರೇಗವುದು, ಕೆಟ್ಟಮಾತುಗಳನ್ನೂ ಬಿಡಬೇಕು. ಇಲ್ಲದಿದ್ದರೆ ಪಿತೃಗಳು ನಿರಾಶರಾಗಿ ಹಿಂತಿರುಗುತ್ತಾರೆ.

"ಘಂಟಾನಾದಂ ವಿವಾದಂ ಚ ಹುಂಕಾರಂ ವಾನ್ಯರೋದನೇ।

ಅವಾಚ್ಯವಚನಂ ಶ್ರುತ್ವಾ ನಿರಾಶಾಃ ಪಿತರೋ ಗತಾಃ॥

ರಂಗವಲ್ಯಾ ಕೃತಾಂ ರೇಖಾಂ ಸ್ಕಂದೇ ಮಾಲಾಂ ದ್ವಿಜಸ್ಯ ಚ।

ಲಲಾಟೇ ತಿಲಕಂ ದೃಷ್ಟ್ವಾ ನಿರಾಶಾಃ ಪಿತರೋ ಗತಾಃ॥

## – ಲಾಂಛನ ವಿಷಯ –

ಆಯಾ ಮತದವರು ತಮ್ಮ ಲಾಂಛನಗಳಾದ ವಿಭೂತಿ, ನಾಮ-ಮುದ್ರೆ ಧಾರಣೆಯ ವಿಷಯದಲ್ಲಿ, ಧರಿಸಲೇಬೇಕು ಎಂದು ಪ್ರಮಾಣ ವಚನಗಳೂ ಇವೆ. ಧರಿಸಬಾರದೆಂದು ನಿಷೇಧವೂ ಇದೆ. ಆದರೆ ಮೃತರ ಕಾರ್ಯಗಳನ್ನು ನಿರ್ವಹಿಸುವ, ಕರ್ತೃಗಳು ದಶಗಾತ್ರ ವಿಧಿಯು ಮುಗಿಯುವ ತನಕ ಹತ್ತು ದಿನಗಳು ಲಲಾಟ ಶೂನ್ಯರಾಗಿರುವುದು ಎಲ್ಲರಲ್ಲಿಯೂ ಸಮನಾಗಿದೆ. ಶ್ರಾದ್ಧಾದಿಗಳಲ್ಲಿ ಕೆಲವರು ಲಾಂಛನವನ್ನು ಧರಿಸುತ್ತಾರೆ. ಮತ್ತೆ ಕೆಲವರು ಧರಿಸುವುದಿಲ್ಲ. ಮತ್ತೆ ಕೆಲವರು ವಿಭೂತಿಯನ್ನು ನೀರಿಂದ ಕಲಸದೇ ಧರಿಸುತ್ತಾರೆ. ಹಾಗೆಯೇ ಕರ್ತೃವಿನ ಪತ್ನಿ ಕುಂಕುಮವನ್ನು ಪಿಂಡಪಿತೃಗಳಿಗೆ ನಮಸ್ಕಾರ ಮಾಡುವ ಸಂದರ್ಭ ಬರುವವರೆಗೂ, ಧರಿಸುವುದಿಲ್ಲ. ಕೆಲವರಲ್ಲಿ

ಲಲಾಟ ಶೂನ್ಯರಾಗಿರದೇ, ಅರಿಸಿನವನ್ನು ಹಣೆಯಲ್ಲಿ ಧರಿಸಿಕೊಂಡಿದ್ದು, ಪಿಂಡಗಳಿಗೆ ನಮಿಸುವಾಗ ಕುಂಕುಮಧಾರಣೆ ಮಾಡುವ ಪದ್ಧತಿ ಇದೆ.

ಈ ಬಗ್ಗೆ ಅವರವರ ಸಂಪ್ರದಾಯವನ್ನು ಬಿಡತಕ್ಕದ್ದಲ್ಲ. ಅವರವರ ಸಂಪ್ರದಾಯ ಅವರವರಿಗೆ ಶ್ರೇಷ್ಠವಾದುದು.

## ಶ್ರಾದ್ಧಕ್ಕೆ ಶ್ರೇಷ್ಠ ವಸ್ತುಗಳು –

ಹಾಲು, ಗಂಗೆ, ಜೇನು, ರೇಷ್ಮೆ, ಮಗಳಮಗ, ಕುತಪಕಾಲ, ಎಳ್ಳು ಈ ಏಳೂ ಶ್ರೇಷ್ಠವಾದವುಗಳು. ಗೋಧಿ ಉದ್ದು, ಹೆಸರುಬೇಳೆ, ತೈಲಪಕ್ವ ಭಕ್ಷ್ಯಗಳೂ ಇಲ್ಲದೆ ಶ್ರಾದ್ಧಮಾಡಬಾರದು. ಕುಂಬಳಕಾಯಿ, ಎಮ್ಮೆಹಾಲು, ತೊಗರಿ, ಬಿಳಿಸಾಸುವೆ, ಕಡಲೇ ಬೇಳೆ, ಜವಳಿಕಾಯಿ ಇವು ಕೂಡದು. ದರ್ಭೆಗಳು ವಿಷ್ಣುವಿನರೋಮದಿಂದಲೂ, ಎಳ್ಳು ಬೆವರಿಂದಲೂ ಹುಟ್ಟಿದವುಗಳು. ಆದುದರಿಂದ ಅವು ಬಹಳ ಪವಿತ್ರ.

ಕರಿಯ ಎಳ್ಳೇ ಪಿತೃಗಳಿಗೆ ಶ್ರೇಷ್ಠ

ಉಚ್ಛಿಷ್ಟಂ, ಶಿವ ನಿರ್ಮಾಲ್ಯಂ, ವಮನಂ ಶಪಕರ್ಪಟಃ।

ಶ್ರಾದ್ಧೇ ಸಪ್ತ ಪವಿತ್ರಾಣಿ ದೌಹಿತ್ರಃ ಕುತುಪ ಸ್ತಿಲಾಃ॥

ಅಗೋಧೂಮಂ ಚ ಯತ್ ಶ್ರಾದ್ಧಂ ಮುದ್ಗ ಮಾಷ ವಿವರ್ಜಿತಮ್।

ತೈಲ ಪಕ್ವೇನ ರಹಿತಂ ಕೃತಮಪ್ಯಕೃತಂ ಭವೇತ್॥

ಕೂಷ್ಮಾಂಡಂ ಮಹಿಷೀಕ್ಷೀರಂ ಆಢಕ್ಯೋ ರಾಜಸರ್ಷಪಾಃ।

ಚಣಕಾ ರಾಜಮಾಷಾಶ್ಚ ಘ್ನಂತಿ ಶ್ರಾದ್ಧ ಮಸಂಶಯಮ್॥

## – ಪಾಕ ಕರ್ತೃಗಳು –

ಒಂದೇ ಪ್ರವರದವರೂ, ಗುಣವಂತರೂ ಆದ ದಾಯಾದಿಗಳೂ, ಉಪಕಾರಿಗಳೂ ಮಿತ್ರರೂ ಪಾಕ ಮಾಡಲು ಶ್ರೇಷ್ಠರು.

ಸಮಾನ ಪ್ರವರೈರ್ಮಿತ್ರೈಃ ಸಪಿಂಡೈಶ್ಚ ಗುಣಾನ್ವಿತೈಃ।

ಕೃತೋಪಕಾರಿಭಿಶ್ಚೈವ ಪಾಕಕಾರ್ಯಂ ಪ್ರಶಸ್ಯತೇ॥

## – ಅಡಿಗೆಯನ್ನು ಬಡಿಸುವ ವಿಷಯ –

ಪಿತೃಗಳ ತೃಪ್ತಿಗೆ ಸೊಸೆಯರೇ ಬಡಿಸಿದರೆ ಬಹಳ ಶ್ರೇಷ್ಠ. ದೇವಕಾರ್ಯ, ಮಾನವ ಕಾರ್ಯ, ಪಿತೃಕಾರ್ಯಗಳಿಗೆ ಸ್ತ್ರೀಸಹಾಯವು ಅತ್ಯಗತ್ಯವಷ್ಟೆ.

ಪರಿವೇಷಣಂ ಪ್ರಶಸ್ತಂ ಹಿ ಭಾರ್ಯಯಾ ಪಿತೃತೃಪ್ತಯೇ।

ಪಿತೃ-ದೇವಮನುಷ್ಯಾಣಾಂ ಸ್ತ್ರೀಸಹಾಯೋ ಯತಃ ಸ್ಮೃತಃ॥

## – ಭೋಜನದಲ್ಲಿ ನಿಯಮ –

ವಿಪ್ರರು, ಭೋಜನ ಸಮಯದಲ್ಲಿ ಮಾಡಿರುವ ಪಾಕಗಳಲ್ಲಿ ತಮಗೆ ಬೇಕಾದರೆ, ಯಾವುದನ್ನೂ ಬೇಕೆಂದಾಗಲಿ, ಬೇಡವೆಂದಾಗಲಿ ಬಾಯಿಂದ ಹೇಳಬಾರದು. ಹಸ್ತಸಂಜ್ಞೆಯಿಂದ ತಿಳಿಸಬೇಕು.

ನಾನ್ನಪಾನಾದಿಕಂ ಶ್ರಾದ್ಧೇ ವಾರಯೇನ್ಮುಖತಃ ಕ್ವಚಿತ್ ಅನಿಷ್ಟತ್ವಾತ್ ಬಹುತ್ವಾದ್ವಾ ಸೂಚಯೇದ್ಧಸ್ತ ಸಂಜ್ಞಯಾ॥

## – ಬಡಿಸುವವರಿಗೆ ನಿಯಮ –

ವಿಪ್ರರಿಗೆ ಎಷ್ಟು ಬೇಕೋ ಅಷ್ಟನ್ನೇ ಬಡಿಸಬಾರದು. ಸ್ವಲ್ಪ ಸ್ವಲ್ಪ ಹೆಚ್ಚಾಗಿಯೇ ಬಲಾತ್ಕಾರದಿಂದ ಬಡಿಸಬೇಕು. ಏಕೆಂದರೆ ತಾವು ಊಟಮಾಡಿದ ಮೇಲೆ, ಉಳಿದ ಎಲ್ಲ ಪಾಕಗಳಿಂದಲೂ ಸ್ವಲ್ಪ ಸ್ವಲ್ಪ ತೆಗೆದುಕೊಂಡು ಉಚ್ಛಿಷ್ಟಭಾಗಿಗಳಿಗೆ ಅವರು ಅರ್ಪಿಸಬೇಕು. "ಭೋಜನಸ್ಯ ನ ಪರ್ಯಾಪ್ತಂ ಕಿಂಚಿದ್ದೇಯಂ ತತೋಽಧಿಕಮ್। ಯದ್ಯದ್ಭುಕ್ತಂ ತತಃ ಕಿಂಚಿತ್ ಕಿಂಚಿದುಚ್ಛಿಷ್ಟಭಾಗಿನಾಮ್॥

ಅಲ್ಲದೇ ಅನ್ನವು ಎಲ್ಲಿಯವರೆಗೂ ಬಿಸಿಬಿಸಿಯಾಗಿರುತ್ತದೆಯೋ, ಹಾಗೂ ಮಾಡಿದ ಪದಾರ್ಥಗಳ ರುಚಿಯನ್ನು ವಿಪ್ರರು ಹೇಳುವುದಿಲ್ಲವೋ, ಅಲ್ಲಿಯತನಕ ಪಿತೃಗಳು ತೃಪ್ತಿಯಾಗಿ ಊಟ ಮಾಡುತ್ತಾರೆ. ಆದುದರಿಂದ ಅನ್ನ ಬಿಸಿಯಾಗಿರಬೇಕು.

ಮಾಡಿದ ಪದಾರ್ಥಗಳ ರುಚಿ ಹೇಳಬಾರದು. ಕರ್ತೃಗಳು ಕೇಳಲೂ ಬಾರದು. ಅಡಿಗೆಯನ್ನು ಶ್ರದ್ಧೆಯಿಂದ ಚೆನ್ನಾಗಿಯೇ ಮಾಡಬೇಕು.

ಅದಕ್ಕಾಗಿಯೇ ಮೌನವನ್ನು ವಿಧಿಸಿರುತ್ತಾರೆ.

"ಯಾವದುಷ್ಣಂ ಭವತ್ಯನ್ನಂ ಯಾವದ್ಭುಂಜೀತ ವಾಗ್ಯತಃ।

ಪಿತರಸ್ತಾವದಶ್ನಂತಿ ಯಾವನ್ನೋಕ್ತಾ ಹವಿರ್ಗುಣಾಃ॥

**ಕೈಯಿಂದ ಬಡಿಸಬಾರದ ಹಾಗೂ ಬಡಿಸಬೇಕಾದ ವಸ್ತುಗಳು:**

ಲವಣವನ್ನು ಎಲೆಗೆ ಬಡಿಸಲೇ ಬಾರದು. ಸಾರು, ತೊವ್ವೆ, ಗೊಜ್ಜು, ಪಲ್ಯ, ಇತ್ಯಾದಿ ವ್ಯಂಜನಗಳನ್ನು ಕೈಯಿಂದ ಬಡಿಸಲೇಬಾರದು. ಬೇಸದಿರುವುದನ್ನೂ, ಹಣ್ಣು ಇತ್ಯಾದಿಗಳನ್ನೂ, ಭಕ್ಷ್ಯಗಳನ್ನೂ ಕೈಯಿಂದಲೇ ಬಡಿಸಬೇಕು.

"ಹಸ್ತದತ್ತಂ ತು ನಾಶ್ನೀಯಾತ್ ಲವಣಂ ವ್ಯಂಜನಾದಿಕಮ್।
ಅಪಕ್ವಂ ತೈಲಪಕ್ವಂ ಚ ಹಸ್ತೇನೈವ ಪ್ರದೀಯತೇ॥

ಪ್ರತ್ಯಕ್ಷ ಲವಣಂ ನಾದ್ಯಾತ್। ಇದು ಸಾಮಾನ್ಯ ನಿಯಮ

## - ಏಕಾದಶೀ ದಿನ ಶ್ರಾದ್ಧವು ಒದಗಿದರೆ-

ಕರ್ತಾ ನೋಪವಸೇತ್ ಶ್ರಾದ್ಧೇ ಪಿತ್ರ್ಯೇಪ್ಯೇಕಾದಶೀ ದಿನೇ।

ತಯೋರಪ್ಯಧಿಕಂ ಬ್ರೂಯುಃ ಪಿತೃಶೇಷಂ ಮಹರ್ಷಯಃ॥

ಮಾತಾಪಿತೃಗಳ ಶ್ರಾದ್ಧ ಮತ್ತು ಏಕಾದಶೀವ್ರತ ಈ ಎರಡೂ ಒಂದೇ ದಿನ ಒದಗಿದರೆ ಏಕಾದಶೀ ನಿಮಿತ್ತ ಉಪವಾಸಕ್ಕಿಂತಲೂ, ಪಿತೃಶೇಷವು ಬಲಿಷ್ಠವಾದುದೆಂದು ಮಹರ್ಷಿಗಳ ಅಭಿಪ್ರಾಯ. ಆದುದರಿಂದ ಪಿತೃಶೇಷವನ್ನು ಕರ್ತೃಗಳು ಸ್ವೀಕರಿಸಬೇಕು.

## – ಶ್ರಾದ್ಧದಲ್ಲಿ ಶಿಷ್ಟಾನ್ನ ಭೋಜಿಗಳು –

ಶ್ರಾದ್ಧ ಶಿಷ್ಟವನ್ನು ಭುಂಜಿಸುವವರು ನರಕ ಫಲವನ್ನು ಅನುಭವಿಸಬೇಕಾಗುತ್ತದೆ. ಆದರೆ ಶ್ರಾದ್ಧ ಶಿಷ್ಟಾನ್ನವನ್ನು ಜ್ಞಾತಿಗಳು ಅಂದರೆ ಹತ್ತು ದಿನ ಆಶೌಚವುಳ್ಳವರು, ಮೂರು ದಿನ ಆಶೌಚವುಳ್ಳವರು ಒಂದು ದಿನ ಹಾಗೂ ಸ್ನಾನಮಾತ್ರದವರು ಊಟ ಮಾಡಬಹುದು. ಜ್ಞಾತಿಗಳಲ್ಲದವರ ಮನೆಯಲ್ಲಿ ಊಟಮಾಡಿದರೆ ಕೃಚ್ಛ್ರ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಆದರೆ, ಹೆಣ್ಣು ಕೊಟ್ಟ ಮಾವನ, ಅತ್ತೆಯ, ವಿದ್ಯಾಗುರುಗಳ, ಸೋದರಮಾವನ, ಹಿರಿಯ ಅಣ್ಣನ ಮಗನ, ಬ್ರಹ್ಮಿಷ್ಠರಾದ ಯೋಗಿಗಳ, ಶ್ರಾದ್ಧ ಶಿಷ್ಟವನ್ನು ಊಟಮಾಡಿದರೆ ದೋಷವಿಲ್ಲ.

ಶ್ರಾದ್ಧಾಪಶಿಷ್ಟ ಭೋಕ್ತಾರಃ ತೇ ವೈ ನಿರಯಗಾಮಿನಃ।
ಸಗೋತ್ರಾಣಾಂ ಸಕುಲ್ಯಾನಾಂ ಜ್ಞಾತಿನಾಂ ಚ ನ ದೋಷಕೃತ್॥
ವಿಪ್ರಸ್ತ್ವನ್ಯಗೃಹೇ ಶ್ರಾದ್ಧ ಶಿಷ್ಟಾನ್ನಂ ನಾಶ್ನಿಯಾತ್ ಸದಾ।
ಪ್ರಾಜಾಪತ್ಯೇನ ಶುದ್ಧಃಸ್ಯಾತ್ ಜ್ಞಾತಿಗೋತ್ರೇ ನ ದೋಷಕೃತ್॥
ಶ್ವಶುರಸ್ಯ ಗುರೋರ್ವಾಪಿ ಮಾತುಲಸ್ಯ ಮಹಾತ್ಮನಃ।
ಜ್ಯೇಷ್ಠಭ್ರಾತುಶ್ಚ ಪುತ್ರಸ್ಯ ಬ್ರಹ್ಮ ನಿಷ್ಠಸ್ಯ ಯೋಗಿನಃ।
ಏತೇಷಾಂ ಶ್ರಾದ್ಧಶಿಷ್ಟಾನ್ನಂ ಭುಕ್ತ್ವಾ ದೋಷೋ ನ ವಿದ್ಯತೇ॥

ಶ್ರಾದ್ಧಶೇಷ ಎಂದರೆ ಅನ್ನ ಮಾತ್ರ. ಎಲ್ಲವೂ ಶ್ರಾದ್ಧ ಶೇಷವಲ್ಲ.

ಫಲಶಾಕ ವ್ಯಂಜನಾನಿ ಪಯೋದಧಿ ಘೃತಂ ಮಧು।
ಪಕ್ವಾಪಕ್ವಾನಿ ಯಾನಿ ಸ್ಯುಃ ತೇಷಾಂ ಶೇಷೋ ನ ವಿದ್ಯತೇ॥

ಹಣ್ಣು, ತರಕಾರಿ, ಗೊಜ್ಜು ಪಲ್ಯ ಮುಂತಾದುವು, ಹಾಲು, ಮೊಸರು, ತುಪ್ಪ, ಜೇನು ಮತ್ತು ಬೇಸಿದ-ಮತ್ತು ಬೇಸದ ಇತರ ವಸ್ತುಗಳೂ ಶೇಷವಲ್ಲ.

### – ಬ್ರಾಹ್ಮಣ ವಿಸರ್ಜನಕ್ಕೆ ಮುಂಚೆ ಮಾಡದಿರುವ ಕರ್ಮಗಳು –

ದಾನ, ಅಧ್ಯಯನ, ದೇವತಾರ್ಚನೆ, ವ್ರತ, ಹೋಮ, ವಿಶೇಷ ಜಪ ಮುಂತಾದವನ್ನು ಶ್ರಾದ್ಧದ ದಿನ ವಿಪ್ರರ ವಿಸರ್ಜನೆಗೆ ಮುಂಚೆ ಮಾಡಬಾರದು.

ದಾನಾಧ್ಯಯನ ದೇವಾರ್ಚಾ ವ್ರತಹೋಮ ಜಪಾದಿಕಾನ್।
ನ ಕುರ್ಯಾತ್ ಶ್ರಾದ್ಧ ದಿವಸೇ ಪ್ರಾಗ್ವಿಪ್ರಾಣಾಂ ವಿಸರ್ಜನಾತ್॥

### – ಭೋಜನ ಪಾತ್ರ ವಿಷಯ –

ವಿಶ್ವೇದೇವರಿಗೆ ಸುವರ್ಣ ಪಾತ್ರವೂ, ಪಿತೃಗಳಿಗೆ ಬೆಳ್ಳಿಯ ಪಾತ್ರವೂ ಪರಮ ಶ್ರೇಷ್ಠವಾದವುಗಳು. ಎಲೆಗಳಲ್ಲಿ ಮುತ್ತುಗದ ಎಲೆಗಳು ಶ್ರೇಷ್ಠ. ಬಾಳೆಎಲೆ, ಹಲಸು, ಮಾವು, ನೇರಳೆ, ಸಂಪಿಗೆ, ಪುನ್ನಾಗ ಮಧ್ಯಮ. ಈ ಕಾಲದಲ್ಲಿ ಮುತ್ತುಗ ಮತ್ತು ಬಾಳೇ ಎಲೆಗಳು ದೊರೆಯುತ್ತವೆ. ಚಿನ್ನ, ಬೆಳ್ಳಿ ಪಾತ್ರೆಗಳು ಅತ್ಯಂತ ಶ್ರೀಮಂತರಿಗೆ ಲಭ್ಯವಾದವುಗಳು. ಬಾಳೆ ಎಲೆಯು ಹಸ್ತ

ಪ್ರಮಾಣ ಇರಬೇಕು. ಹಸ್ತ ಎಂದರೆ 24 ಅಂಗುಲ. (ಒಂದು ಮೊಳ) ವಿಪ್ರರ ಎಡಕ್ಕೆ ತುದಿಯು ಬರುವಂತೆ ಅಗ್ರವುಳ್ಳ ಎರಡೆರಡು ಬಾಳೇ ಎಲೆಗಳನ್ನು ಒಬ್ಬೊಬ್ಬರಿಗೆ ಹಾಕಬೇಕು.

''ಭೋಜನೇ ಹೈಮರೂಪ್ಯಾಣಿ ದೈವೇ ಪಿತ್ರೇ ಯಥಾಕ್ರಮಮ್।

ಪಾಲಾಶೇಭ್ಯೋ ವಿನಾ ನ ಸ್ಯುಃ ಪರ್ಣಪಾತ್ರಾಣಿ ಭೋಜನೇ॥

ಕದಲೀ ಚೂತ-ಪನಸ-ಜಂಬೂ-ಪುನ್ನಾಗ-ಚಂಪಕಾ ಮಧ್ಯಮಾಃ॥''

ಸದಂಡ ಕದಳೀ ಪತ್ರಂ ವಾಮಭಾಗಾಗ್ರ ಮಾಯಾತಮ್।

ಹಸ್ತಪ್ರಮಾಣಂ ಕುರ್ವೀತ ಭೋಜನಾರ್ಥಮಿತೀರಿತಮ್॥

## – ಪವಿತ್ರವಿಲ್ಲದೆ ಮಾಡಬೇಕಾದ ಕಾರ್ಯಗಳು –

ಪಾದ ಪ್ರಕ್ಷಾಳನೆ ಮತ್ತು ಗಂಧದಾನದಲ್ಲಿ ಪವಿತ್ರವಿರಬಾರದು. ಇತರ ಎಲ್ಲ ಕಾರ್ಯಗಳಿಗೂ ಪವಿತ್ರ ಅಗತ್ಯ.

ಸರ್ವತ್ರ ದರ್ಭಪಾಣಿಃಸ್ಯಾತ್ ದೈವೇ ಪಿತ್ರ್ಯೇ ಚ ಕರ್ಮಣಿ।

ಪಾದಶೌಚಂ ಗಂಧದಾನಂ ನ ಕುರ್ಯಾದ್ದರ್ಭ ಪಾಣಿನಾ॥

ಕೆಲವು ಮಹಾದೋಷಗಳು ಸಂಭವಿಸದಂತೆ ಕರ್ತೃಗಳೂ ನಿಮಂತ್ರಿತ ವಿಪ್ರರೂ ಹಿಂದಿನ ದಿನ ರಾತ್ರಿಯಿಂದಲೇ ಕಟ್ಟು ನಿಟ್ಟಾಗಿ ಇರಬೇಕು. ಮೇಲೆ ತಿಳಿಸಿದ ಕರ್ತೃ, ಭೋಕ್ತೃಗಳಲ್ಲಿ ಯಾರಿಗೂ ಅಸಮಯದಲ್ಲಿ ವಾಂತಿ ಆಗಲೇ ಕೂಡದು. ಪರಸ್ಪರ ಎಲೆಯ ಎಂಜಲು ತಾಕಬಾರದು. ಯಾರ ಮಧ್ಯದಲ್ಲಿಯೂ, ಬೆಕ್ಕು, ಕಪ್ಪೆ, ಇಲಿ ಮನುಷ್ಯರಾಗಲಿ ಬರಬಾರದು. ಹಾಗೂ ಕರ್ಮ ಸಂದರ್ಭದಲ್ಲಿ ಯಾರ ಜನಿವಾರವೂ ಹರಿದುಹೋಗಬಾರದು. ಕಟ್ಟಿದ ಪಿಂಡಗಳು ಸರ್ವಥಾ ಒಡೆದು ಹೋಗಬಾರದು. ಇವುಗಳಿಗೆ ಮಹಾ ಅನರ್ಥಗಳೇ ಫಲಗಳು. ಪರಿಹಾರವೂ ಕಷ್ಟಸಾಧ್ಯ. ಆದ ಕಾರಣ ಯಾವ ಕಾರಣದಿಂದಲೂ ಇಂತಹ ದೋಷಗಳು ಸಂಭವಿಸದಂತೆ ಎಲ್ಲರೂ ಎಚ್ಚರಿಕೆಯಿಂದ ಇರುವುದು ಸೂಕ್ತ. '' ಸುಲಭಕೋಪಾಃ ಪಿತರಃ'' ಪಿತೃಗಳು ಸುಲಭವಾಗಿ ಕೋಪಿಸಿಕೊಳ್ಳುವರು. ಅವರ ಕೋಪಕ್ಕೆ ತುತ್ತಾಗಬಾರದು. ''ಶೀಘ್ರ ಫಲದಾಶ್ಚ''

ಬೇಗನೆ ನಮ್ಮ ಅಭಿಲಾಷೆಗಳನ್ನು ಅನುಗ್ರಹಿಸುವವರು. ಆದುದರಿಂದ ಸಮರ್ಪಕವಾಗಿ ಕರ್ಮವನ್ನು ನೆರವೇರಿಸಿ ಅನುಗ್ರಹಕ್ಕೆ ಪಾತ್ರರಾಗಬೇಕು.

## – ಆಚಮನ –

ಶರೀರ ಶುದ್ಧಿಗಾಗಿ, ಮೊದಲು ಎರಡು ಬಾರಿ ಆಚಮನ ಮಾಡುವುದು. ನಂತರ, ಪಾದಪ್ರಕ್ಷಾಳನೆ ವಾಯಸಪಿಂಡಪ್ರದಾನ, ವಿಕಿರ, ಚರೋಃ ಪ್ರಾಣರಕ್ಷಭಕ್ಷಣೇ (ಅಘ್ರಾಣನ) ಕರ್ಮದ ಕೊನೆ ಇಷ್ಟು ಸಂದರ್ಭಗಳಲ್ಲಿ ಆಚಮನ ಮಾಡಬೇಕು. ಶಿಖೆಯುಳ್ಳವರು ಬಿಚ್ಚದಂತೆ ಭದ್ರವಾಗಿ ಗಂಟು ಹಾಕಿಕೊಳ್ಳಬೇಕು. ಇಲ್ಲದವರು ಸ್ಥಳಸ್ಪರ್ಶ ಮಾಡಿಕೊಳ್ಳಬೇಕು.

ಇಂದಿನ ಕಾಲದಲ್ಲಿ ಸ್ಪೃಷ್ಟ-ಅಸ್ಪೃಷ್ಟ ದೋಷಗಳೇ ಅತಿಯಾಗಿ ಇರುವುದರಿಂದ, ಕೆಲವರು ಶ್ರಾದ್ಧದ ಹಿಂದಿನ ದಿನವೇ ಪಂಚಗವ್ಯ ತೆಗೆದುಕೊಳ್ಳುವ ಹಾಗೂ, ನೂತನ ಜನಿವಾರವನ್ನೂ ಹಾಕಿಕೊಳ್ಳುವ ರೂಢಿಯಿಟ್ಟು ಕೊಂಡಿರುತ್ತಾರೆ. ಇದು ಒಳ್ಳೆಯ ಪದ್ಧತಿ

## – ಪಂಚ ಕಚ್ಚೆ –

ಕರ್ತೃವು ಬ್ರಹ್ಮಚಾರಿಯಾಗಿದ್ದರೆ ಕೌಪೀನ ಧರಿಸಿ, ದಟ್ಟಿಪಂಚೆಯನ್ನುಡಬೇಕು. ಗೃಹಸ್ಥರಾಗಿದ್ದರೆ 'ಪಂಚಕಚ್ಚೆ'' ಉಡಬೇಕು. ನಾಭಿ, ಹಿಂದೆ, ಎಡ, ಬಲಪಕ್ಕ ನಾಭಿಸ್ಥಾನದಲ್ಲಿ ಇನ್ನೊಂದು ಬಾರಿ ಹೀಗೆ ಐದು ಸ್ಥಳಗಳಲ್ಲಿ ಸಿಕ್ಕಿಸಿಕೊಂಡು ಪಂಚೆಯನ್ನು ಉಟ್ಟುಕೊಳ್ಳಬೇಕು. ಹೊದೆಯುವ ಪಂಚೆ ಇಬ್ಬರಿಗೂ ಇರಲೇ ಬೇಕು.

ಕುಕ್ಷಿದ್ವಯೇ. ತಥಾಪೃಷ್ಠೇ, ನಾಭೌ ದ್ವೌ ಪರಿಕೀರ್ತಿತೌ।

ಪಂಚ ಕಚ್ಚಾಸ್ತು ತೇ ಪ್ರೋಕ್ತಾಃ ಸರ್ವಕರ್ಮಸು ಶೋಭನಾಃ॥

ಅಂಚುಳ್ಳ ಬಿಳೀ ಬಟ್ಟೆಗಳು ಶ್ರೇಷ್ಠ. ತ್ರಿಕಚ್ಛ, ಪುಚ್ಛಕಚ್ಛ, ಬಣ್ಣ ಬಣ್ಣದ ಬಟ್ಟೆಗಳೂ ಕೂಡದು.

## – ಪವಿತ್ರ –

''ಪವೇಃ ತ್ರಾಯತೇ ಇತಿ ಪವಿತ್ರಮ್'' ವಜ್ರದಂತೆ ಅಭೇದ್ಯವಾದ ಅಜ್ಞಾನಕ್ಕೆ ಪವಿತ್ರ ಎಂದು ಹೆಸರು. ಇಂತಹ ಅಜ್ಞಾನದಿಂದ ರಕ್ಷಿಸುತ್ತದೆ ಎಂದರೆ ಬಿಡುಗಡೆ

ಮಾಡಿಸುವ ಕರ್ಮ ಸಾಧನವೇ ಪವಿತ್ರ. ಇದು ದರ್ಭೆಯಿಂದ ಮಾಡಿದ, ಉಂಗುರದ ಬೆರಳಿಗೆ ಹಾಕಿ ಕೊಳ್ಳುವ ಕರ್ಮಸಾಧನ. ನಿತ್ಯಕರ್ಮಗಳಿಗೆ ಎರಡು ದರ್ಭೆಗಳಿಂದಲೂ, ಶ್ರಾದ್ಧಕ್ಕೆ ಮೂರು ದರ್ಭೆಗಳಿಂದಲೂ, ಶಾಂತಿಕ ಪೌಷ್ಟಿಕ ಕರ್ಮಗಳಿಗೆ ನಾಲ್ಕು ದರ್ಭೆಗಳಿಂದಲೂ ಪವಿತ್ರ ಮಾಡಿರಬೇಕು. ಪವಿತ್ರವಂತಃ ಎಂಬ ಮಂತ್ರ ಹೇಳಿ ಅಥವಾ ಓಂ ಭೂರ್ಭುವಸ್ಸುಃ' ಎಂಬ ಮಂತ್ರ ಹೇಳಿ ಧರಿಸಬೇಕು. ಕೆಲವರಲ್ಲಿ ಎರಡು ಕೈನ ಅನಾಮಿಕೆಗೂ ಧರಿಸುವ ರೂಢಿಯಿದೆ. ಕೆಲವರು ಬಲಗೈಯಲ್ಲಿ ಮಾತ್ರ ಧರಿಸುತ್ತಾರೆ. (ಎರಡು ಗಿಣ್ಣುಗಳ ಮಧ್ಯೇ ಇರಬೇಕು)

ಪಂಚಭಿಃ ಪೌಷ್ಟಿಕೇ ಚೈವ ಚತುರ್ಭಿರ್ಯಜ್ಞಕರ್ಮಣಿ।
ಪಿತೃಯಜ್ಞೇ ತ್ರಿಭಿರ್ದರ್ಭೈಃ ದ್ವೌ ದರ್ಭೌ ನಿತ್ಯಕರ್ಮಣಿ॥
ದ್ವಾಭ್ಯಾಮನಾಮಿಕಾಭ್ಯಾಂತು ಧಾರ್ಯೇ ದರ್ಭಪವಿತ್ರಕೇ।
ಏಕಾನಾಮಿಕಯಾ ವಾಪಿ ದ್ವಯೋರ್ಮಧ್ಯೇತು ಪರ್ವಣೋಃ॥

## – ಕೂರ್ಚ –

ಇದು ದರ್ಭದಿಂದ ಮಾಡಿದ ಒಂದು ಸಾಧನ. ಉದ್ಧರಣೆಯಂತೆ ಉಪಯುಕ್ತವಾದುದು. ಆಚಮನ. ಅನ್ನಸಮರ್ಪಣ, ಕರ್ಮಸಮರ್ಪಣ, ಅಪೋಶನ, ಉತ್ತರಾಪೋಶನ ಈ ಸ್ಥಳಗಳಲ್ಲಿ ಉದ್ಧರಣೆಯಿಂದ ನೀರನ್ನು ತೆಗೆದು ಕೊಡಬೇಕು. ಇತರ ಪ್ರೋಕ್ಷಣಾದಿ ಸಂದರ್ಭಗಳಲ್ಲಿ ಕೂರ್ಚದಿಂದಲೇ ಕಾರ್ಯವನ್ನು ನಿರ್ವಹಿಸಬೇಕು. ಶಾಂತಿಕ, ಪೌಷ್ಟಿಕ, ಪುಣ್ಯಾಹ, ಕಲಶಗಳಲ್ಲಿ ಹಾಕುವ ಕೂರ್ಚವು ಕರ್ಮ ವಿಘಾತಕರ ಬಾಧೆಯ ನಿವಾರಣೆಗೆ ಉಪಯುಕ್ತವಾಗಿದೆ. ಅದನ್ನು ಕಲಶದಲ್ಲಿರಿಸಬೇಕು. ಇಲ್ಲಿ ಆ ಕೂರ್ಚವಲ್ಲ.

ಪ್ರಥಮಾಬ್ದೇ ಪಂಚ ದರ್ಭೈಃ ಪ್ರತ್ಯಬ್ದೇ ಸಪ್ತಭಿಸ್ತಥಾ।
ತೀರ್ಥೇ ಮಹಾಲಯೇ ಚೈವ ನವ ದರ್ಭೈಸ್ತು ಕೂರ್ಚಕಃ॥
ಪಾರ್ವಣ ಶ್ರಾದ್ಧಕ್ಕೆ ಏಳು ದರ್ಭೆಗಳ ಕೂರ್ಚ.

## – ಋಷಿ ದೇವತಾ ಛಂದಃ –

ಶ್ರಾದ್ಧ, ಯಜ್ಞ ಯಾಗಗಳು, ಬ್ರಹ್ಮಯಜ್ಞಗಳಲ್ಲಿ, ಓಂಕಾರ, ಋಷಿ, ದೇವತೆ, ಮತ್ತು ಛಂದಸ್ಸನ್ನು ಸ್ಮರಿಸಬಾರದು.

ನ ಚ ಸ್ಮರೇದ್ ಋಷಿಂ ಛಂದಃ ಶ್ರಾದ್ಧೇ ವೈತಾನಿಕೇ ಮಖೇ।

ಬ್ರಹ್ಮಯಜ್ಞೇ ಚ ವೈ ತದ್ವತ್ ತಥೋಂಕಾರಂ ತು ನೋಚ್ಚರೇತ್॥

## – ಸಾಮಾನ್ಯ ಸಂಕಲ್ಪ –

ಕರ್ತೃವು ಪ್ರಾಣಾಯಾಮ ಮಾಡಿ, "ಶ್ರೀ ಗೋವಿಂದ, ಗೋವಿಂದ,....... ಮಹಾವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ-ಆದ್ಯಬ್ರಹ್ಮಣಃ.......ಸಂವತ್ಸರಾದಿಗಳನ್ನೆಲ್ಲಾ ಹೇಳಿ "ಶುಭತಿಥೌ" ಶಬ್ದಕ್ಕೆ ಬದಲಾಗಿ ಪುಣ್ಯ ತಿಥೌ, ಹೇಳಿ ಪ್ರಾಚೀನಾವೀತಿ (ಜನಿವಾರವನ್ನು ಎಡಕ್ಕೆ ಹಾಕಿ) ಯಾರ ಶ್ರಾದ್ಧವೋ ಅದನ್ನು (ಪಿತುಃ) (ಮಾತುಃ) ಎಂದು ಹೇಳಿ ಈ ಪ್ರತಿಸಾಂವತ್ಸರಿಕ ಮೃತಾಹಾನ್ನ ಶ್ರಾದ್ಧದಲ್ಲಿ, ಮೊದಲು, ತನ್ನ ಶರೀರದ, ಪಾತ್ರಗಳ, ಸಕಲ ಉಪಯುಕ್ತ ಪದಾರ್ಥಗಳ, ಕರ್ತೃ, ಭೋಕ್ತೃಗಳ, ಶುದ್ಧಿಗಾಗಿ ಕಾಲಾತೀತ ದೋಷ ಪ್ರಾಯಶ್ಚಿತ್ತಕ್ಕಾಗಿ, ವೈಶ್ವದೇವಾದಿಸೂಕ್ತ ಮಂತ್ರಪಠನ ಮಾಡುತ್ತೇನೆ. ತಿಲೋದಕ ಯವೋದಕಗಳನ್ನೂ ಅರ್ಪಿಸುತ್ತೇನೆ. ಅದಕ್ಕಾಗಿ ಭೂಪ್ರಾರ್ಥನಾದಿ ಕಲಶಸ್ಥಾಪನೆ ಮಾಡುತ್ತೇನೆ. ಎಂದು ನಿರ್ಧರಿಸುವುದೇ ಸಂಕಲ್ಪ.

ಯುವಜವೆಗೋಧಿಯ ತರಹದ ಧಾನ್ಯ. ಅದರ ಬದಲು ನೆನೆಸಿದ ಅಕ್ಕಿಯನ್ನು ಉಪಯೋಗಿಸಬೇಕು.

## – ಕಲಶ ಸ್ಥಾಪನೆ –

ಪಿತೃಗಳ ಕಾರ್ಯಕ್ಕೂ ವಿಶ್ವೇದೇವರ ಕಾರ್ಯಗಳಿಗೂ ಬೇರೆ ಬೇರೆಯೇ ಕಲಶಗಳನ್ನು ಸ್ಥಾಪಿಸುವ ಪದ್ಧತಿ ಕಂಡಿಲ್ಲ.ಒಂದೇ ಕಲಶವನ್ನು ಸ್ಥಾಪಿಸಿ, ಸಕಲ ವಿಧ ದೋಷ ಪರಿಹಾರಕವಾದ ಸೂಕ್ತಗಳ ಹಾಗೂ ಮಂತ್ರಗಳ ಪಾರಾಯಣದಿಂದ ಕಲಶಜಲವನ್ನು ಅಭಿಮಂತ್ರಿಸಿ, ಅದನ್ನು ಎಲ್ಲ ಕರ್ಮಗಳಿಗೂ ಉಪಯೋಗಿಸಿಕೊಳ್ಳಬೇಕು. "ಶಾರೀರಷಟ್ಕ" ಮಂತ್ರಗಳೂ "ಅಗ್ನಿಃ ಶುಚಿಃ" "ಏತೋನ್ವಿಂದ್ರಂ" ಮಂತ್ರಗಳೂ ಶುದ್ಧಿಗಾಗಿಯೇ ವಿನಿಯುಕ್ತವಾಗಿವೆ. ಹೀಗೆ ಅಭಿಮಂತ್ರಿಸಿದ ನೀರನ್ನು ಎಲ್ಲಾ ಸ್ಥಳಕ್ಕೂ ಪ್ರೋಕ್ಷಿಸಿ, ಸ್ಥಳವು ಶುದ್ಧವಾಯಿತೆಂದು ಬ್ರಾಹ್ಮಣರಿಂದ ಪ್ರತಿವಚನವನ್ನು ಪಡೆಯಬೇಕು.

## – ಬ್ರಹ್ಮ ದಂಡ: –

ಈ ಬ್ರಹ್ಮಾಂಡಗಳು ದೈವಾಧೀನ. ದೈವವು ಮಂತ್ರಗಳ ಅಧೀನ. ಈ ಮಂತ್ರಗಳು ಬ್ರಾಹ್ಮಣರ ಅಧೀನ. ಆದುದರಿಂದ, ಬ್ರಾಹ್ಮಣರೇ ಪರದೈವವೆಂದು ಅರಿಯಬೇಕು. ಕರ್ತೃವು ತನಗೆ ಪ್ರಕೃತ ಕರ್ಮವನ್ನು ಆಚರಿಸಲು ಅರ್ಹತೆಯನ್ನು ಬ್ರಾಹ್ಮಣರ ಅನುಮತಿಯನ್ನು ಪಡೆದು ನಿಶ್ಚಿಯಿಸಿಕೊಳ್ಳಬೇಕು. ಅದಕ್ಕಾಗಿ ಪರಿಹಾರ ರೂಪವಾಗಿ ಯಥಾಶಕ್ತಿ ಕಾಣಿಕೆಯನ್ನು ಪ್ರಣಾಮಪೂರ್ವಕ ವಾಗಿ ವಿಪ್ರರಿಗೆ ಅರ್ಪಿಸುವುದೇ ಬ್ರಹ್ಮದಂಡ "ಯಾವತೀರ್ವೈ" ಎಂಬ ಮಂತ್ರವೇ, "ಸಕಲ ದೇವತೆಗಳಿಗೂ ವೇದವಿತ್ತಾದ ಬ್ರಾಹ್ಮಣರು ಆಶ್ರಯ. ನಿತ್ಯವೂ ಅವರನ್ನುನಮಿಸಬೇಕು. ಅಶ್ಲೀಲ ವಚನಗಳನ್ನು ಆಡಲೇಬಾರದು. ಇದರಿಂದ ಸಕಲ ದೇವತೆಗಳೂ ಸಂತುಷ್ಟರಾಗುತ್ತಾರೆ" ಎಂದು ಘೋಷಿಸುತ್ತಿದೆ.

ಹೀಗೆ ಕಾಣಿಕೆಯನ್ನರ್ಪಿಸಿ "ಈ ಕರ್ಮವನ್ನು ಆಚರಿಸಲು ಅಧಿಕಾರವು ಸಿದ್ಧಿಸಲಿ, ಕಾಲವು ಸಕಾಲವಾಗಿದೆ" ಎಂದೂ ಅನುಗ್ರಹಿಸಿರಿ ಎಂದು ಪ್ರಾರ್ಥಿಸಿ ಅನುಮತಿ ಪಡೆಯಬೇಕು.

## – ಉಪವೀತದಿಂದ ಮಾಡುವ ಕಾರ್ಯಗಳು –

ಸ್ವಾಗತ, ಸ್ವಸ್ತಿವಾಚನ, ದಕ್ಷಿಣಾ, ಪ್ರದಕ್ಷಿಣೆ, ಅಭಿವಾದನ, ಅರ್ಘ್ಯ, ಈ ಆರು ಕರ್ಮಗಳಲ್ಲಿ ಉಪವೀತಿಯಾಗಿರಬೇಕು.

ಸ್ವಾಗತೇ ಸ್ವಸ್ತಿವಚನೇ ದಕ್ಷಿಣಾಯಾಂ ಪ್ರದಕ್ಷಿಣೇ।

ಗೋತ್ರವಂದನ ಮರ್ಘ್ಯೇ ಚ ಷಟ್ ಸ್ವೇತೇಷೂಪ ವೀತಿನಾ॥

## – ವಿಶೇಷ ಸಂಕಲ್ಪ –

ಸವ್ಯದಿಂದ ಪ್ರಾಣಾಯಾಮ ಮಾಡಿ, ತಿಥ್ಯಾದಿಗಳನ್ನು ಹೇಳಿ. ಪುಣ್ಯ ತಿಥೌ – ಪ್ರಾ॥ ಮಾಡಿಕೊಂಡು ಆಗ್ನೇಯಾಭಿಮುಖನಾಗಿ ತಿರುಗಿ, ಎಡಮಂಡಿಯನ್ನೂರಿ, ಬಲಮಂಡಿಯ ಮೇಲೆ ಎಳ್ಳುದೊನ್ನೆ ಮತ್ತು ದರ್ಭ ಮುಷ್ಟಿಯನ್ನೂ ಇಟ್ಟುಕೊಂಡು.....ಈ ಶ್ರಾದ್ಧದಲ್ಲಿ ಸಂಬಂಧ, ಹೆಸರು, ಗೋತ್ರ ರೂಪ ಇವುಗಳನ್ನು ಷಷ್ಠೀವಿಭಕ್ತಿಯಿಂದ ಹೇಳಿ, ಎಳ್ಳನ್ನು ದರ್ಭಮುಷ್ಟಿಯಿಂದ ತೆಗೆದುಕೊಂಡು ಪಿತೃತೀರ್ಥದಿಂದ ದೊನ್ನೆಗೇ ಹಾಕುವುದು.

ಸವ್ಯದಲ್ಲಿ ಬಲಮಂಡಿಯೂರಿ ಪೂರ್ವಕ್ಕೆ ತಿರುಗಿಕೊಂಡು, ಎಡಮಂಡಿಯ ಮೇಲೆ ಅಕ್ಕಿಯ ದೊನ್ನೆ ದರ್ಭಮುಷ್ಟಿಯಿಟ್ಟುಕೊಂಡು ಪುರೂರವ ಆರ್ದ್ರವ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ಎಂದು ಹೇಳಿ, ದರ್ಭಮುಷ್ಟಿಯೊಡನೆ ಅಕ್ಕಿಕಾಳುಗಳನ್ನು ತೆಗೆದುಕೊಂಡು, ಆ ದೊನ್ನೆಗೇ ದೇವತೀರ್ಥದಿಂದ ಹಾಕುವುದು. ನಂತರ ನಿಮ್ಮ ಅನುಜ್ಞೆಪಡೆದು. ದೈವಸಹಿತವಾದ ಈ ಪಾರ್ವಣ ಶ್ರಾದ್ಧವನ್ನು ಪಾರ್ವಣ ವಿಧಾನದಿಂದ ಅನ್ನಾದಿ ದ್ರವ್ಯಗಳಿಂದ ಮಾಡುತ್ತೇನೆ ಎಂದು ಹೇಳುವುದು.

ಸೂಚನೆ:- ಪ್ರಾಚೀನಾವೀತಿ-ಜನಿವಾರವು ಬಲದ ಹೆಗಲಲ್ಲಿದ್ದು ಎಡಕೈಕೆಳಗೆ ಲಂಬಿಸಿರುವುದು

ಉಪವೀತಿ (ಸವ್ಯ)

ಜನಿವಾರವು ಎಡದ ಹೆಗಲಲ್ಲಿದ್ದು ಬಲಗೈ ಕೆಳಗೆ ಲಂಬಿಸಿರುವುದು.

ನಿವೀತಿ-ಜನಿವಾರವು ಎರಡೂ ಹೆಗಲಲ್ಲಿದ್ದು ಮಾಲೆ ಯಂತಿರುವುದು.

ದೇವತೀರ್ಥ-ಬಲಗೈ ಎಲ್ಲಾ ಬೆರಳುಗಳ ತುದಿಯಿಂದ ನೀರನ್ನು ಬಿಡುವುದು.

ಋಷಿ ತೀರ್ಥ-ಬಲಗೈ ಬಗ್ಗಿಸಿ ಕಿರುಬೆರಳಿನ ಬುಡದಲ್ಲಿ ನೀರನ್ನು ಬಿಡುವುದು.

ಪಿತೃತೀರ್ಥ-ಬಲಗೈನ ತೋರುಬೆರಳು ಮತ್ತು ಅಂಗುಷ್ಠಗಳ ಮಧ್ಯದಿಂದ ನೀರನ್ನು ಬಿಡುವುದು.

## – ಪಾದ ಪ್ರಕ್ಷಾಳನೆ –

ನಿಮಂತ್ರಿತ ವಿಪ್ರರಿಗೆ ಎರಡನೆ ಬಾರಿ ಕ್ಷಣಕೊಟ್ಟು, ಗೃಹಾಂಗಣದಲ್ಲಿ ಗೋಮಯದಿಂದ ಭೂ ಶುದ್ಧಿಮಾಡಿ, ಕರ್ತೃವು ಪೂರ್ವಾಭಿಮುಖವಾಗಿ ಕುಳಿತು ಉತ್ತರಕ್ಕೆ ಚೌಕವಾದ ಮಂಡಲವನ್ನು ಪ್ರದಕ್ಷಿಣವಾಗಿಯೂ, ಆದರ ದಕ್ಷಿಣಕ್ಕೆ ಅಪ್ರದಕ್ಷಿಣವಾಗಿ

(ಸೊನ್ನೆಯಂತೆಂಯೂ ಮಂಡಲ ಮಾಡಬೇಕು. ಚೌಕ ಮಾಡುವಾಗ ನೈಋತ್ಯದಿಂದ ಆರಂಭಿಸಿ ನಾಲ್ಕೂ ದಿಕ್ಕುಗಳಲ್ಲಿ ಗೆರೆ ಪ್ರದಕ್ಷಿಣವಾಗಿ ಬಂದು ಆ ಗೆರೆ ವಕ್ರವಾಗಿ ಈಶಾನ್ಯಕ್ಕೆ ಮುಗಿಯಬೇಕು.

ಸೊನ್ನೆಯ ರೇಖೆಯು ಈಶಾನ್ಯದಿಂದ ಆರಂಭವಾಗಿ ಅಪ್ರದಕ್ಷಿಣವಾಗಿ ಪುನಃ ಈಶಾನ್ಯದವರೆಗೂ ಬಂದು, ವಕ್ರವಾಗಿ ನೈಋತ್ಯಕ್ಕೆ ಮುಗಿಯಬೇಕು.

ಚೌಕವು ದೇವತೆಗಳಿಗೂ, ವರ್ತುಲವು ಪಿತೃಗಳಿಗೂ ಶ್ರೇಷ್ಠ.

ಚೌಕವಾದ ಮಂಡಲಕ್ಕೆ ಬ್ರಹ್ಮ-ವಿಷ್ಣು-ರುದ್ರ-ಶ್ರೀ ಅಗ್ನಿ ಇವರು ಅಧಿದೇವತೆಗಳು. ವರ್ತುಲ ಮಂಡಲಕ್ಕೆ ಆದಿತ್ಯರು, ವಸುಗಳು, ರುದ್ರರೂ, ವಿಶ್ವೇದೇವರೂ, ಪಿತೃಗಳು, ಅಧಿದೇವತೆಗಳು. ಮಂಡಲಗಳನ್ನು ಅಷ್ಟಾರ್ಘ್ಯ ದ್ರವ್ಯಗಳಿಂದ ಪೂಜಿಸಿ, ನಂತರ ಪಾದಪ್ರಕ್ಷಾಳನೆ ಮಾಡಬೇಕು.

ಅಷ್ಟಾರ್ಘ್ಯದ್ರವ್ಯಗಳು-ನೀರು, ಹಾಲು ದರ್ಭಾಗ್ರ-ಗಂಧ, ದಧಿ, ನೆನೆದ, ಅಕ್ಕಿ ತುಪ್ಪ, ಜೇನು, ಈ ಎಲ್ಲವನ್ನು ಒದಗಿಸಿಕೊಳ್ಳಲು ಸಾಧ್ಯವಾಗದಾಗ, ಹತ್ತಿರವಿರುವ ದರ್ಭೆ ಎಳ್ಳು ಅಕ್ಕಿ ಗಂಧ ಇಷ್ಟರಿಂದಲೇ ಪೂಜಿಸಿ, ನೀರಿನಲ್ಲಿಯೇ ಅಷ್ಟಾರ್ಘ್ಯದ್ರವ್ಯಗಳು ಅಡಕವಾಗಿವೆ ಎಂದು ಭಾವಿಸುವುದು.

ಮೊದಲು ವಿಶ್ವೇದೇವಸ್ಥಾನದ ವಿಪ್ರರು ಪೂರ್ವಾಭಿಮುಖವಾಗಿ ಕುಳಿತು ತಮ್ಮ ಪಾದಗಳನ್ನು ಚೌಕದ ಮಂಡಲದ ಮೇಲೆ ಇಡಬೇಕು. ಆಗ ಕರ್ತೃವು ಪಶ್ಚಿಮಾಭಿಮುಖನಾಗಿ ಸ್ವಾಗತಿಸಿ, ನಮಸ್ಕರಿಸಿ, ಪವಿತ್ರವನ್ನು ತೆಗೆದು, ಹಿಮಡಿಯಿಂದ ಕೆಳಕ್ಕೆ ಬಲ ಎಡ ಪಾದಗಳನ್ನು ತೊಳೆದು, ಬಟ್ಟೆಯಿಂದ ಒರಸಿ, ಪಾದತೀರ್ಥವನ್ನು ಸಕಲ ಪುಣ್ಯತೀರ್ಥಗಳೆಂದು ಭಾವಿಸಿ. ತಲೆಗೆ ಪ್ರೋಕ್ಷಿಸಿ ಕೊಳ್ಳಬೇಕು.

ನಂತರ ಪವಿತ್ರವನ್ನು ಧರಿಸಿ, ಪಶ್ಚಿಮಾಭಿಮುಖನಾಗಿ ಪಿತೃಸ್ಥಾನದ ವಿಪ್ರರನ್ನು ಆಸನದಲ್ಲಿ ಪೂರ್ವಾಭಿಮುಖವಾಗಿ ಕುಳ್ಳಿರಿಸಿ, ಅವರ ಪಾದಗಳನ್ನು ವರ್ತುಲ ಮಂಡಲದಲ್ಲಿರಿಸಿ, ಸ್ವಾಗತಿಸಿ, ನಮಸ್ಕರಿಸಿ ಅವರ ಪಾದಮೂಲದಲ್ಲಿ ಪಿತೃಗಳೂ, ಮಧ್ಯದಲ್ಲಿ ಪಿತಾಮಹರೂ, ತುದಿಯಲ್ಲಿ ಪ್ರಪಿತಾಮಹರೂ, ಇದ್ದಾರೆಂದು ಭಾವಿಸಿ ಪವಿತ್ರವಿಲ್ಲದೆ, ಹಿಮಡಿಯಿಂದ ಕೆಳಗೆ ಪಾದಗಳನ್ನು ತೊಳೆದು, ತೀರ್ಥವನ್ನು ಸಕಲ ಪುಣ್ಯಕ್ಷೇತ್ರಗಳ ತೀರ್ಥವೆಂದು ಭಾವಿಸಿ, ತಲೆಗೆ ಪ್ರೋಕ್ಷಿಸಿಕೊಂಡು, ಗಂಧಾದಿ ದ್ರವ್ಯಗಳಿದ್ದ ಎಲೆಯನ್ನು ದಕ್ಷಿಣಾಗ್ರವಾಗಿ ಹಾಕಿ ಪವಿತ್ರವನ್ನು ಬಿಚ್ಚಿ ಹಾಕಿ, ಕೈಕಾಲುಗಳನ್ನು ತೊಳೆದು, ಮೊದಲು ಆಚಮನ ಮಾಡಬೇಕು. ನಂತರ ವಿಪ್ರರು ಆಚಮನ ಮಾಡಬೇಕು. ವಿಷ್ಣು ಸ್ಥಾನವಿದ್ದರೆ,

ದೇವ ಮಂಡಲದಲ್ಲಿಯೇ ಪಾದಪ್ರಕ್ಷಾಳನೆ, ವಿವಾಹ, ಉತ್ಸವ ಯಜ್ಞ ಪಾರ್ವಣಶ್ರಾದ್ಧಗಳಲ್ಲಿ ವಿಪ್ರರನ್ನು ಪೀಠದಲ್ಲಿ ಕೂರಿಸಿ ಪಾದಪ್ರಕ್ಷಾಳನೆ ಮಾಡಬೇಕು.

ದತ್ವಾ ದೈವೇ ಕ್ಷಣಂ ಪಾದೌ ಪಿತ್ರೇ ಚೈವಾಪಸವ್ಯತಃ।
ಪಾದ ಪ್ರಕ್ಷಾಳನಂ ಕೃತ್ವಾ ಕುರ್ಯಾ ದಾಚಮನೀಯಕಮ್॥
ವಿವಾಹೋತ್ಸವ ಯಜ್ಞೇಷು ಶ್ರಾದ್ಧೇ ಚೈವ ತು ಸರ್ವದಾ।
ವಿಪ್ರಾಣಾಮುಪವಿಷ್ಟಾನಾಂ ಪಾದೌ ಪ್ರಕ್ಷಾಳಯೇದ್ವಿಜಃ
ಪಾದಮೂಲೇ ಪಿತುಃಸ್ಥಾನಂ ಪಾದಮಧ್ಯೇತು ತತ್ಪಿತಾ ।
ಪ್ರಪಿತಾಮಹಸ್ಯ ಪಾದಾಗ್ರೇ ಪಾದೌಪ್ರಕ್ಷಾಳಯೇತ್ಕ್ರಮಾತ್ ॥
ಆಪಃ ಕ್ಷೀರಂ ಕುಶಾಗ್ರಾಣಿ ಗಂಧಾ ದಧಿ ಚ ತುಂಡುಲಾಃ।
ಸರ್ಪಿಷಾ ಮಧುಸಂಯುಕ್ತಾ ಅಷ್ಟಾರ್ಘ್ಯಾಃ ಪರಿಕೀರ್ತಿತಾಃ॥
ವಿಪ್ರಾಣಾಮುಪವಿಷ್ಟಾನಾಂ ಪ್ರಾಕ್ ಮುಖಾನಾಂ ತು ಸರ್ವದಾ।
ಪಾದೌ ಪ್ರಕ್ಷಾಳಯೇತ್ ಶ್ರಾದ್ಧೇ ಸಂವಿಷ್ಟಃ ಪ್ರತ್ಯಗಾನನಃ॥
ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ಶ್ರೀ ಹುತಾಶನ ಏವ ಚ।
ಮಂಡಲಾನ್ಯಧತಿಷ್ಠಂತಿ ತಸ್ಮಾತ್ ಕುರ್ವೀತ ಮಂಡಲಮ್॥
ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಸ್ಸಪೈತೃಕಾಃ
ಮಂಡಲೇ ಚೋಪತಿಷ್ಠಂತಿ ತಸ್ಮಾತ್ ಕುರ್ವೀತ ಮಂಡಲಮ್॥

## – ಶ್ರಾದ್ಧೋಪಕ್ರಮ –

ಇಲ್ಲಿಯವರೆಗೆ ಪ್ರಾಯಶ್ಚಿತ್ತ ಸೂಕ್ತಪಾರಾಯಣ, ಸ್ಥಳಶುದ್ಧಿ, ಆತ್ಮಶುದ್ಧಿ, ವಿಪ್ರರಿಗೆ ದ್ವಿತೀಯ ಕ್ಷಣ ಪೂರ್ವಕವಾಗಿ ಪಾದಪ್ರಕ್ಷಾಳನವೂ, ಮುಗಿಯಿತು. ಇದಿಷ್ಟೂ ಪೂರ್ವಭಾಗ. ಸಂಕಲ್ಪಮಾಡಿ, ಶ್ರಾದ್ಧಘಾತಕ ಅಸುರ–ರಕ್ಷಃ ಪಿಶಾಚಿಗಳು ದೂರಸರಿಯುವಂತೆ ಸುತ್ತಲೂ ಅಪ್ರದಕ್ಷಿಣವಾಗಿ ಎಳ್ಳನ್ನು ಎರಚಿ

ದ್ವಾರದಲ್ಲಿ ಎಳ್ಳು ದರ್ಭೆಗಳನ್ನೂ ಹಾಕಬೇಕು. ಉಭಯ ವಿಪ್ರರ ಮುಂದೆಯೂ ಭೂ ಶುದ್ಧಿ ಮಾಡಿ.

ಗಯೆ, ಜನಾರ್ದನ (ಗದಾಧರ) ವಸುರುದ್ರ ಆದಿತ್ಯ ರೂಪರಾದ ಪಿತೃಗಳನ್ನೂ ಮನಸಾರೆ ಸ್ಮರಿಸಿ ಆರಂಭಿಸಬೇಕು.

ನಾನೇ ಸಂಪಾದಿಸಿರುವ ಪದಾರ್ಥಗಳು ಶ್ರಾದ್ಧಾರ್ಹವಾಗಿವೆ ಎಂದು ಅನುಗ್ರಹಿಸಿ. ಪಾಕಾದಿಗಳು ಪವಿತ್ರವಾಗಿವೆ ಎಂದು ಅನುಗ್ರಹಿಸಿ ಎಂದು ಕೇಳಿ, ವಿಪ್ರರಿಂದ 'ಅಸ್ತು' ಎಂಬ ಅನುಮತಿ ಪಡೆದು ವಿಶ್ವೇದೇವಾರ್ಚನೆ ಮಾಡಬೇಕು.

## – ವಿಶ್ವೇದೇವಾರ್ಚನಮ್ –

ದಕ್ಷಬ್ರಹ್ಮನ ಮಗಳೇ ವಿಶ್ವಾ. ಇವಳ ಪತಿ ಧರ್ಮ, ಇವರ ಮಕ್ಕಳೇ ವಿಶ್ವೇದೇವ ದೇವತೆಗಳು, ಇವರು ಉಗ್ರವಾದ ತಪಸ್ಸು ಮಾಡಿ, ಬ್ರಹ್ಮನನ್ನೂ ಪಿತೃಗಳನ್ನೂ ಸಂತೃಪ್ತಿಪಡಿಸಿ, ಶ್ರಾದ್ಧದಲ್ಲಿ, ನಾವು ಭಾಗಿಗಳಾಗುವಂತೆ ಅನುಗ್ರಹಿಸಬೇಕೆಂದು ವರ ಪಡೆದರು. ಈ ಲೋಕದಲ್ಲಿ ನಡೆಯುವ ಸಕಲ ಕರ್ಮಗಳಲ್ಲೂ ನಿಮಗೆ ಸ್ಥಾನವುಂಟೆಂದು ಪಿತೃದೇವತೆಗಳು ಅನುಮೋದಿಸಿದರು. ಆದುದರಿಂದಲೇ ವಿಶ್ವೇದೇವದೇವತೆಗಳಿಗೆ ಮೊದಲರ್ಚನೆ. ಇವರೇ, ನಮ್ಮ ಪಿತೃದೇವತೆಗಳು ಯಾವ ರೂಪದಿಂದದ್ದರೂ, ಅವರನ್ನು ಜ್ಞಾನಿಗಳಾದ ಅವರು ತಮ್ಮ ಜೊತೆಯಲ್ಲಿ ಕರೆತರುವರೆಂದೂ, ಹಾಗೆಯೇ, ವಿಸರ್ಜನೆಯಲ್ಲಿ ಮೊದಲು ಪಿತೃಗಳು, ನಂತರ ವಿಶ್ವೇದೇವತೆಗಳು ಅವರನ್ನು ಹಿಂಬಾಲಿಸುವರೆಂದೂ ವಾಯುಪುರಾಣದಲ್ಲಿ ಹೇಳಿದೆ.

ವಿಶ್ವೇದೇವದೇವತೆಗಳ ಮತ್ತು ಪಿತೃಗಳ ಅರ್ಚನೆಯಲ್ಲಿ ಅರ್ಘ್ಯಪಾತ್ರಗಳಿಗೆ ವಿಶೇಷ ಮಹತ್ವ ಕೊಟ್ಟಿದ್ದಾರೆ. ಅರ್ಘ್ಯಪಾತ್ರೆಯಲ್ಲಿ ಅವರು ಇರುತ್ತಾರೆಂದು ಹೇಳಲಾಗಿದೆ. ಕಡೆಯಲ್ಲಿ ಸ್ವಸ್ತಿವಾಚನ, ಅಕ್ಷಯ್ಯೋದಕಗಳಾದ ನಂತರ ಆ ಪಾತ್ರೆಗಳನ್ನು ಆಸ್ಥಾನದ ವಿಪ್ರರಿಗೆ ಕೊಡುವತನಕ ಅದನ್ನು ರಕ್ಷಿಸಬೇಕು. ವಿಪ್ರರಲ್ಲಿ ಆವಾಹನೆ ಮಾಡುವಾಗ ಕರ್ತೃವು, ನೆನೆದ ಅಕ್ಕಿ ದರ್ಭೆಗಳನ್ನು ತೆಗೆದುಕೊಂಡು ಅವರ ಬಲಭಾಗದಲ್ಲಿ ಪಾದದಿಂದ ಶಿರಸ್ಸಿನವರೆಗೂ "ವಿಶ್ವೇದೇವಾಸ" ಮಂತ್ರಹೇಳುತ್ತಾ ಪೂಜಿಸಿ, ದರ್ಭೆಗಳನ್ನು ಶಿರಸ್ಸಿನಲ್ಲಿಟ್ಟು, ಆವಾಹಿಸಿ, ಉಳಿದ ಅಕ್ಷತವನ್ನು ಪಾದದಬಳಿ ಅರ್ಪಿಸಿ, "ವಿಶ್ವೇದೇವಾಃ ಶ್ರುಣುತೇಮಂ" ಎಂಬ ಮಂತ್ರದಿಂದ ಕೈಮುಗಿದು ಪ್ರಾರ್ಥಿಸಬೇಕು.

ಇತರ ಎಲ್ಲಾ ಉಪಚಾರಗಳ ಆದಿ-ಮತ್ತು ಅಂತಗಳಲ್ಲಿ ಹಸ್ತೋದಕವನ್ನು ಕೂರ್ಚದಿಂದ ವಿಪ್ರರಿಗೆ ಕೊಡಬೇಕು. ಇವರ ಅನುಮತಿ ಪಡೆದು ಪಿತ್ರರ್ಚನೆ ಮಾಡಬೇಕು.

## – ಪಿತ್ರರ್ಚನೆ –

ವಸು-ರುದ್ರ-ಆದಿತ್ಯಾಧಿಷ್ಠಿತರಾದ ಪಿತೃಗಳ ವಿಷಯವನ್ನು ತಿಳಿಸಿದ್ದಾಗಿದೆ. ಪಿತ್ರರ್ಚನೆಯಲ್ಲಿ ಆಗ್ನೇಯಾಭಿಮುಖರಾಗಿರಬೇಕು. ಎಡಮಂಡಿಯನ್ನು ನೆಲಕ್ಕೆ ಊರಬೇಕು. ಆವಾಹನೆ ಮಾಡುವಾಗ ವಿಪ್ರರ ಎಡಭಾಗದಲ್ಲಿ ತಲೆಯಿಂದ ಪಾದದವರೆಗೆ ಎಳ್ಳು ದರ್ಭೆಗಳಿಂದ "ಉಶಂತಸ್ತ್ವಾ" ಮಂತ್ರ ಹೇಳುತ್ತಾ ಪೂಜಿಸಿ, ದರ್ಭೆಗಳನ್ನು ಶಿರಸ್ಸಿನಲ್ಲಿಟ್ಟು, ಉಳಿದ ಎಳ್ಳನ್ನು ಪಾದದ ಬಳಿ ಸಮರ್ಪಿಸಿ, "ಆಯಂತುನಃ" ಎಂಬ ಮಂತ್ರದಿಂದ ಕೈ ಮುಗಿದು ಪ್ರಾರ್ಥಿಸಬೇಕು. ಇಲ್ಲಿಯೂ ಅರ್ಘ್ಯಪಾತ್ರಜಲವನ್ನು ಸಂಸ್ಕರಿಸಿ, ವಿಪ್ರರಿಗೆ ಕ್ರಮವಾಗಿ ಅರ್ಘ್ಯ ಕೊಟ್ಟು ಪ್ರಪಿತಾಮಹರ ಪಾತ್ರದ ನೀರನ್ನು ಪಿತಾಮಹರ ಪಾತ್ರೆಗೆ ಹಾಕಿ, ಆ ನೀರನ್ನು ಪಿತೃಪಾತ್ರಕ್ಕೆ ಹಾಕಿ, ಪ್ರಪಿತಾಮಹರ ಪಾತ್ರವನ್ನು ಪಿತೃಪಾತ್ರದ ಮೇಲೆ ಕವುಚಬೇಕು. ಅದನ್ನು ಅಲ್ಲಾಡಿಸಬಾರದು. ಅವರಲ್ಲಿ ಪಿತೃಗಳು ಇರುತ್ತಾರೆಂದು ಮಹರ್ಷಿಗಳ ವಚನವುಂಟು. ಈ ನಿಯಮ, ಪಿತೃಪಾತ್ರೆಗಳಿಗೆ ಮಾತ್ರ, ಈ ಪಾತ್ರಾಸಾದನೆಯನ್ನು ಉತ್ತರಾಭಿಮುಖವಾಗಿ ಕುಳಿತಿರುವ ವಿಪ್ರರ ಬಲಬದಿಯಲ್ಲಿ ಜಲಪಾತ್ರಕ್ಕಿಂತ ಸ್ವಲ್ಪ ದೂರದಲ್ಲಿ ವಾಯುವ್ಯದಿಂದ ಆಗ್ನೇಯಾಭಿಮುಖವಾಗಿ ಇಟ್ಟುಕೊಂಡರೆ ಸೌಕರ್ಯ. ಅವರ ಎದುರಿಗೆ ಪಾತ್ರಾಸಾದನ ಮಾಡಿದರೆ ಶಾಸ್ತ್ರಾನುಷ್ಠಾನಕ್ಕೆ ಲೋಪ ಬರುತ್ತದೆ. ಪಾತ್ರೆಗಳನ್ನು ಎತ್ತಿ, ಬೇರೆ ಕಡೆ ಇಡಬೇಕಾಗುತ್ತದೆ. ಇಲ್ಲಿಯೂ ಎಲ್ಲಾ ಉಪಚಾರಗಳ ಆದಿ-ಅಂತದಲ್ಲಿ ಹಸ್ತೋದಕ ಕೊಡಬೇಕು.

ವಿಷ್ಣುವಿನ ಅರ್ಚನೆಯು ವಿಶ್ವೇದೇವರ ಅರ್ಚನೆಯಂತೆ. ಅರ್ಘ್ಯಪಾತ್ರ ಒಂದು ಮಾತ್ರ. ಪಾತ್ರಾಸಾಧನೆಗೆ ಬೆಳ್ಳಿ, ಕಲ್ಲಿನ ಮತ್ತು ಮಣ್ಣಿನ ಪಾತ್ರೆಗಳು ಶ್ರೇಷ್ಠ. ಅಥವಾ ಎಲ್ಲವೂ ಒಂದೇ ರೀತಿಯದಾಗಿರಬೇಕು. ಪರ್ಣಗಳಲ್ಲಿ ಬಾಳೆ ಎಲೆಯ ದೊನ್ನೆಗಳೇ ಶ್ರೇಷ್ಠ.

## -ಪಾಣಿ ಹೋಮ-

ಪಿತೃಸ್ಥಾನದಲ್ಲಿ ವರ್ತುಲವಾಗಿ ಮಂಡಲ ಮಾಡಿ, ಎಲೆ ಹಾಕಿ ಎಲೆಯ ಮುಂದೆ ಪ್ರೋಕ್ಷಿಸಿ, ಎಳ್ಳು ದರ್ಭೆಹಾಕಿ ತುಪ್ಪ ಮತ್ತು ಅನ್ನದ ದೊನ್ನೆ ಇಟ್ಟು ಸಂಸ್ಕರಿಸಬೇಕು.

ಈ ಪಾರ್ವಣ ಶ್ರಾದ್ಧದಲ್ಲಿ ಪ್ರಧಾನವಾದ ಮೂರು ಕರ್ಮಗಳಲ್ಲಿ, ಪಾಣಿಹೋಮವು ಮೊದಲನೆಯದು. ಈ ಶ್ರಾದ್ಧಕ್ಕೆ ಪ್ರಕೃತಿಯಾದ ಪಿಂಡ ಪಿತೃಯಜ್ಞದಲ್ಲಿ "ಅಗ್ನೌಕರಣವೇ" ನಡೆಯುತ್ತದೆ. ಕರ್ತೃವು ಅನಗ್ನಿಕನಾಗಿರುವ ಪ್ರಯುಕ್ತ "ಪಾಣಿಮುಖಾಃ ಪಿತರಃ" ಎಂಬ ಪ್ರಮಾಣದಂತೆ, ಪಿತೃಸ್ಥಾನದಲ್ಲಿ ನಿಮಂತ್ರಿತರಾದ ಬ್ರಾಹ್ಮಣರ ಬಲ ಅಂಗೈನಲ್ಲಿಯೇ ಹೋಮಮಾಡಬೇಕು. "ಬ್ರಾಹ್ಮಣಸ್ಯ ದಕ್ಷಿಣೇ ಪಾಣೌ. ಹೋತವ್ಯಮ್" ಎಂಬ ಶ್ರುತಿಯು ಬ್ರಾಹ್ಮಣರ ಬಲಗೈನಲ್ಲಿ ಅಗ್ನಿ ಇದೆ ಎಂದು ಸಾರುತ್ತಿದೆ. ಪಿತೃಮಂತನಾದ ಸೋಮನೂ, ಕವ್ಯವಾಹನನಾದ ಅಗ್ನಿಯೂ ದೇವತೆಗಳು. ಎಡಗೈನ ದರ್ಭದಿಂದ ಬಲಗೈಗೆ ಅಭಿಘಾರ ಮಾಡಿಕೊಂಡು ಅನ್ನದ ದೊನ್ನೆಯಲ್ಲಿರುವ ಪೂರ್ವಭಾಗದ ಅನ್ನವನ್ನು ಎರಡು ಬಾರಿ ತೆಗೆದುಕೊಂಡು ಪುನಃ ಎಡಗೈ ದರ್ಭೆಯಿಂದ ಅಭಿಘಾರಮಾಡಿ, ಸೋಮಾಯ ಪಿತೃಮತೇ ಸ್ವಧಾ ನಮಃ, ಅಗ್ನಯೇ ಕವ್ಯವಾಹ ನಾಯ ಸ್ವಧಾ ನಮಃ ಎಂದು ಅರ್ಪಿಸಿ ಅಭಿವಾದನ ಮಾಡಬೇಕು.

ಕರ್ತೃವು ಬ್ರಹ್ಮಚಾರಿ ಅಥವಾ ವಿಧುರನಾಗಿದ್ದರೆ ಪಿತೃಸ್ಥಾನದ ವಿಪ್ರರ ಅನುಮತಿ ಪಡೆದು ವಿಶ್ವೇದೇವರ ಸ್ಥಾನದ ವಿಪ್ರನ ಕೈನಲ್ಲಿಯೇ ಹೋಮ ಮಾಡಬೇಕು. ಅನುಮಾಸಿಕ ಶ್ರಾದ್ಧಗಳಲ್ಲಿ ಪಾಣಿ ಹೋಮದ ಹವಿಸ್ಸನ್ನು ಅಗ್ನಿಗೆ ಅರ್ಪಿಸುವ ರೂಢಿಯಿದೆ

ಅನಗ್ನಿಕಃ ಸದಾರಶ್ಚೇತ್ ಅಗ್ನೌಕರ್ಮ ಪಿತುಃ ಕರೇ।

ವೈಶ್ವದೇವಕರೇ ಕುರ್ಯಾತ್ ಬ್ರಹ್ಮಚಾರ್ಯಕಳತ್ರಕಃ।

## – ಪಾಕಪರಿವೇಷಣ –

ದೇವ ಮತ್ತು ವಿಷ್ಣು ಸ್ಥಾನದಲ್ಲಿ ಚೌಕ. ಪಿತೃಸ್ಥಾನದಲ್ಲಿ ಸೊನ್ನೆ. ಕ್ರಮವಾಗಿ ಎಲೆಗಳನ್ನು ಹಾಕಿ.

ಅನ್ನಂ ಚ ಪಾಯಸಂ ಭಕ್ಷ್ಯಂ ಘೃತಂ ಚ ವ್ಯಂಜನಾದಿಕಮ್। ಸೂಪಮಂತೇ ಪ್ರದಾತವ್ಯಂ ಸರ್ವಂ ಸ್ಯಾದ್ದೇವ ಪೂರ್ವಕಮ್॥

ಮೊದಲು ವಿಶ್ವೇದೇವರ ಎಲೆ, ಪಿತೃಗಳ ಎಲೆ, ವಿಷ್ಣುವಿನ ಎಲೆ ಈ ಕ್ರಮದಲ್ಲಿ, ಅನ್ನ, ಪಾಯಸ, ಭಕ್ಷ ಪಲ್ಯ ಮುಂತಾದವುಗಳನ್ನು ಬಡಿಸಿ, ಕಟ್ಟಕಡೆಯಲ್ಲಿ ತೊವ್ವೆ ಈ ಕ್ರಮದಲ್ಲಿ ಬಡಿಸಬೇಕು.

## - ಅನ್ನಸೂಕ್ತ -

ಪಾಕ ಮಾಡುತ್ತಿರುವಾಗ ಘಮಘಮನೆ ಸುವಾಸನೆ ಬರುವುದು ಸಹಜ. ಪಾಕ ಮಾಡುತ್ತಿರುವಾಗ ವಾಸನೆಯನ್ನು ಗಮನಿಸಬಾರದೆಂದು ನಿಯಮ. ನೋಡಿ ತೃಪ್ತರೂ ಆಗಬಾರದು. ಆದುದರಿಂದ, ಆಘ್ರಾಣ ದೋಷ ಪರಿಹಾರ, ಹಾಗೂ ಅನ್ನಶುದ್ಧಿ, ಅನ್ನ ಸಂಸ್ಕಾರಕ್ಕಾಗಿ "ಮೂರ್ಧಾನಂ" ಇತ್ಯಾದಿ ಅನ್ನ ಸೂಕ್ತವನ್ನು ಪಠಿಸಬೇಕು.

## - ಅನ್ನ ಸಮರ್ಪಣಂ -

ಶ್ರಾದ್ಧದಲ್ಲಿ ಎರಡನೆಯ ಪ್ರಧಾನ ಕರ್ಮ, ಬ್ರಾಹ್ಮಣ ಭೋಜನ. ನಿಮಂತ್ರಿತ ವಿಪ್ರರೇ ವಿಶ್ವೇದೇವರು. ಹಾಗೂ ಪಿತೃದೇವತೆಗಳು. ಅವರು ಅಡಿಗೆ ರುಚಿಯ ವಿಷಯವಾಗಿ ಏನೂ ಹೇಳಬಾರದು. ಮಂತ್ರಗಳನ್ನು ಘಟ್ಟಿಯಾಗಿ ಹೇಳಬಾರದು. ಕರ್ತೃವೇ ಪರಿಷೇಚನಾದಿ ಮಂತ್ರಗಳನ್ನು ಹೇಳುತ್ತಾರೆ. ಮೌನದಿಂದರಬೇಕು. ಎಡಕೈಯಿಂದ ಭೋಜನ ಪಾತ್ರವನ್ನು ಹಿಡಿದಿರಬೇಕು. ಬೇಕಾದದ್ದನ್ನು ಸಂಜ್ಞೆಯಿಂದ ಪಡೆಯಬೇಕು. ದಾಕ್ಷಿಣ್ಯ, ಸಂಕೋಚ, ಸರ್ವಥಾ ಇರಕೂಡದು. ಅನ್ನ ಬಿಸಿಬಿಸಿ ಯಾಗಿರಬೇಕು ಕರ್ತೃವು ಪರಿಷೇಚನ ಪ್ರೋಕ್ಷಣ ಗಳನ್ನು ಮಾಡಿ, ವಿಪ್ರರಿಗೆ ಎಲ್ಲವನ್ನು ಮುಟ್ಟಿಸಿ, ಎಲೈ ವಿಶ್ವೇ ದೇವದೇವತೆಗಳೇ (ಪಿತೃಗಳೆ) ಈ ಭೂಮಿಯೇ ಪಾತ್ರೇ, ಸ್ವರ್ಗವೇ, ಮುಚ್ಚಳ, ಈ ಬಡಿಸಿದ ಎಲ್ಲವೂ ಹವಿಸ್ಸು. ವಿಪ್ರರಾದ ತಮ್ಮ ಮುಖಾಗ್ನಿಯಲ್ಲಿ ಹೋಮ ಮಾಡುತ್ತಿದ್ದೇನೆ. ಈ ವಿದ್ಯಾವಂತರಾದ ವಿಪ್ರರ ಪ್ರಾಣಾಪಾನಗಳಲ್ಲಿ ಹೋಮ ಮಾಡುತ್ತಿದ್ದೇನೆ. ಎಲೈ ಅನ್ನವೇ, ನೀನು ಅಕ್ಷಯವಾಗಿದ್ದೀಯೆ ನನ್ನನ್ನು ನಾಶಗೊಳಿಸಬೇಡ. ಎಂದು ಪ್ರಾರ್ಥಿಸಿ, ಎಲೈ, ಪುರೂರವ-ಆರ್ದ್ರವ, ವಿಶ್ವೇದೇವರೇ, (ಪಿತೃಗಳೇ) (ವಿಷ್ಣು) ಇಗೋ, ಇದೇ ಅನ್ನ, ಇದು ಹವಿಸ್ಸು, ಬ್ರಾಹ್ಮಣರಾದ ನೀವೇ ಆಹವನೀಯಾಗ್ನಿ. ಈ ಬಡಿಸಿರುವ ಬಡಿಸಲಿರುವ ಎಲ್ಲವೂ ನಿಮ್ಮದು. ಈ ಭೂಮಿಯೇ ಗಯೆ. ನೀವು ಗದಾಧರರು. ಈ ಅನ್ನವು ಬ್ರಹ್ಮ, ಸಮರ್ಪಿಸುವ ನಾನೂ ಬ್ರಹ್ಮ, ತಾವೂ ಬ್ರಹ್ಮ. ಎಲ್ಲವೂ ಬ್ರಹ್ಮ. ಇದು ಚಿನ್ನದ (ಬೆಳ್ಳಿಯ) ಪಾತ್ರೆ ಎಂದು ಭಾವಿಸಿದ್ದೇನೆ. ಈ ಸ್ಥಳವು ಅಕ್ಷಯ ವಟವೃಕ್ಷದ ನೆರಳು. ತೃಪ್ತಿಯಾಗುವ ವರೆಗೂ ಸಮರ್ಪಿಸಲ್ಪಡುವ ಈ ಅಮೃತ ಸ್ವರೂಪವಾದ ಹವಿಸ್ಸನ್ನು ತಮಗೆ ಸಮರ್ಪಿಸುತ್ತೇನೆ. ಇದೆಲ್ಲವೂ ತಮ್ಮದು.

ಸನ್ನದಲ್ಲ ಈ ಹವಿಸ್ಸು ಗಯೆಯಲ್ಲಿ (ವಿಷ್ಣುಪಾದವೇ) (ರುದ್ರಪಾದವೇ) ಮುಂತಾದ ಸಮಸ್ತಪಾದಗಳಲ್ಲಿಯೂ, ಸಮಸ್ತ ತೀರ್ಥಗಳಲ್ಲಿಯೂ ಸಮರ್ಪಿತವಾಯಿತೆಂದು ತಾವು ಅನುಗ್ರಹಿಸಬೇಕು. ಎಂದು ಪ್ರಾರ್ಥಿಸಬೇಕು. ಹಾಗೆಯೇ ಆಗಲಿ, ಗದಾಧರನು ಸುಪ್ರೀತನಾಗಿದ್ದಾನೆಂದು ವಿಪ್ರರು ಅನುಗ್ರಹಿಸುವರು.

ಹೀಗೆ ಸಮರ್ಪಿಸುವ ಮುನ್ನ ದೇವತೆಗಳಿಗೂ, ಪಿತೃಗಳಿಗೂ, ಯೋಗಿ ವರೇಣ್ಯರಿಗೂ, ಸ್ವಧಾದೇವಿಗೂ, ಸ್ವಾಹಾದೇವಿಗೂ, ನಮಿಸಿ, ಪರಮೇಶ್ವರ ಮತ್ತು ಮಹಾವಿಷ್ಣುವೇ ಪಿತೃಗಳ ರೂಪದಲ್ಲಿ ಗಯೆಯಲ್ಲಿ ಸನ್ನಿಹಿತರಾಗಿದ್ದಾರೆಂದು ಭಾವಿಸಿ, ತಮ್ಮ ಕ್ಷೇತ್ರವನ್ನೇ ಪುಣ್ಯ ಕ್ಷೇತ್ರವಾದ ಗಯೆ ಎಂದು ಭಾವಿಸಬೇಕು.

## – ಬ್ರಹ್ಮಾರ್ಪಣಮ್ –

ಶ್ರಾದ್ಧಮಹಿಮೆಯನ್ನು ಪ್ರಕಟಿಸುವ ಸಪ್ತವ್ಯಾಧರ ಚರಿತ್ರೆಯನ್ನು ಸ್ಮರಿಸಿ, ಈಕರ್ಮವನ್ನು ಪಿಂಡ ಪಿತೃಯಜ್ಞವೆಂದೇ ಭಾವಿಸಿ, ಯಜ್ಞದಲ್ಲಿ ಹವ್ಯಕವ್ಯಗಳನ್ನು ಅರ್ಪಿಸುವಾಗ ಪ್ರಯೋಗಿಸುವ "ಆಶ್ರಾವಯ" ಮುಂತಾದ ಐದು ಮಂತ್ರಗಳನ್ನೂ ಉಚ್ಚರಿಸಿ, ಅರ್ಪಣವೂ ಬ್ರಹ್ಮ, ಹವಿಸ್ಸು ಬ್ರಹ್ಮ, ಅಗ್ನಿಯೂ ಬ್ರಹ್ಮ, ಹೋಮಕರ್ತೃವೂ ಬ್ರಹ್ಮ, ಈ ಕ್ರಿಯೆಯೂ ಬ್ರಹ್ಮ, ಸರ್ವವೂ ಬ್ರಹ್ಮಮಯ ಎಂಬ ಭಾವನೆಯಿಂದ ತ್ಯಾಗ ಮಡುವುದೇ ಬ್ರಹ್ಮಾರ್ಪಣ. ಹೀಗೆ ಭಾವಿಸಿ ಉದ್ಧರಣೆ ನೀರು ಬಿಡಬೇಕು.

## – ಮಧು ಪರಿವೇಷಣ –

ಪಿತೃಗಳಿಗೆ ಅತ್ಯಂತ ಪ್ರಿಯವಾದ ವಸ್ತುಗಳಲ್ಲಿ ಮಧು ಒಂದು. "ಅದನ್ನು" ಮಧುವಾತಾ" ಎಂಬ ಮಂತ್ರಗಳಿಂದ ಸಂಸ್ಕರಿಸಿ ಎಲ್ಲಾ ಎಲೆಗಳಿಗೂ ಬಡಿಸಬೇಕು. ವಿಪ್ರರು, ತುಪ್ಪ, ಮಧು, ಪಾಯಸ ಇವುಗಳನ್ನು ನಿಶ್ಶೇಷವಾಗಿ ಭಕ್ಷಿಸಬೇಕು.

## – ಚಿತ್ರ ಬಲಿ ವಿಷಯ –

ಶ್ರಾದ್ಧೇ ವಿವಾಹೇ ಯಜ್ಞೇ ಚ ಗಯಾಯಾಂ ನಿಶಿ ಸೂತಕೇ। ಯದಿ ಚಿತ್ರ ಬಲಿಂ ದದ್ಯಾತ್ ರೌರವಂ ನರಕಂ ವ್ರಜೇತ್।

ಶ್ರಾದ್ಧದಲ್ಲಿ, ವಿವಾಹದಲ್ಲಿ, ಯಜ್ಞದಲ್ಲಿ, ಗಯೆಯಲ್ಲಿ, ರಾತ್ರಿಯಲ್ಲಿ, ಸೂತಕದಲ್ಲಿ, ಚಿತ್ರಬಲಿಯನ್ನು ಕೊಡಬಾರದು.

## – ವಿಪ್ರರಲ್ಲಿ ಪ್ರಾರ್ಥನೆ –

ಪಿತೃಗಳ ಮುಕ್ತಿಗೆ ಕಾರಣರಾದ ಈಶಾನಾದಿಗಳನ್ನು ಸ್ಮರಿಸಿ, ಸ್ವಗೃಹವನ್ನೇ ಗಯೆ ಯೆಂದು ಭಾವಿಸಿ, ವಿಪ್ರರನ್ನು ಗದಾಧರರೆಂದೂ ಭಾವಿಸಿ, ಕ್ರಮವಾಗಿ ಆಪೋಶನ ಹಾಕಬೇಕು. ಪ್ರಾಣಹುತಿಯನ್ನು ವಿಪ್ರರು ಸ್ವೀಕರಿಸಿದ ಮೇಲೆ, ಸೊಣ ಮುಂತಾದವುಗಳು ಭಾದಿಸಬಾರದೆಂದು ಮಂತ್ರಪೂರ್ವಕವಾಗಿ ಪ್ರಾರ್ಥಿಸಿ.

ವಿಪ್ರೋತ್ತಮರಿರಾ, ದೂರದಿಂದ ದಣಿದು ಬಂದಿದ್ದೀರಿ, ಹಸಿದಿದ್ದೀರಿ, ಮಾಡಿದ ಪಾಕಗಳಲ್ಲಿ ನಿಮಗೆ ಬೇಕಾದುದನ್ನು ದಾಕ್ಷಿಣ್ಯಮಾಡಿಕೊಳ್ಳದೇ ಸೂಚಿಸಿರಿ. ಬೇಡದುದನ್ನು ಬಿಟ್ಟು ಬಿಡಿ, ರಾತ್ರಿಯಲ್ಲಿ ಹಸಿವಾಗದಂತೆ ಸುಖವಾಗಿ ಮೌನದಿಂದ ತೃಪ್ತಿಯಾಗುವಂತೆ ಭೋಜನ ಮಾಡಿರಿ. ಎಂದು ವಿಶೇಷವಾದ ಭಕ್ತಿ, ಶ್ರದ್ಧೆ, ಪ್ರೀತಿ ವಿಶ್ವಾಸಗಳಿಂದ ಪ್ರಾರ್ಥಿಸಬೇಕು.

## – ಅಭಿಶ್ರವಣ ಮಂತ್ರಪಾರಾಯಣ –

ವಿಪ್ರರ ಭೋಜನ ಸಮಯದಲ್ಲಿ ಶ್ರಾದ್ಧಕ್ಕೆ ಅಡ್ಡಿಯಾದ ರಕ್ಷೋಬಾಧಾ ನಿವೃತ್ತಿಗಾಗಿ ಬೇರೆಯ ಋತ್ವಿಜರಿಂದ ಪಾರಾಯಣ ಮಾಡಿಸುವ ಮಂತ್ರಗಳಿಗೆ ಅಭಿಶ್ರವಣ ಸೂಕ್ತಗಳೆಂದು ಹೆಸರು. ರಾಕ್ಷೋಘ್ನ ಮಂತ್ರಗಳು, ಪವಮಾನ ಮಂತ್ರಗಳು, ಉಪನಿಷತ್ತುಗಳು ಗಂಗಾವತರಣ, ಇತ್ಯಾದಿಗಳು. ಕರ್ತೃವೂ ಪಾರಾಯಣ ಮಾಡಬಹುದು.

## – ವಾಯಸಪಿಂಡಪ್ರದಾನಮ್ –

ವಾಯಸ ಪಿಂಡ ಎಂಬುದು ಅಶ್ವಲಾಯನ ಗೃಹ್ಯ ಸೂತ್ರದಲ್ಲಿಲ್ಲ. ವಿಪ್ರರ ಭೋಜನವಾದ ಮೇಲೆ ಆಚಮನ ಮಾಡಿದ ನಂತರ ಉಚ್ಛಿಷ್ಟದ ಹತ್ತಿರ ''ಯೇಽಗ್ನಿ ದಗ್ಧಾಃ'' ಎಂಬ ಮಂತ್ರದಿಂದ ಕೊಡುವ ಪಿಂಡವನ್ನು ಪ್ರಕಿರ ಎಂದಿದ್ದಾರೆ. ಹಾಗೆಯೇ ವಿಶ್ವೇದೇವರ ಹಾಗೂ ಪಿತೃಗಳ ಸಮೀಪದಲ್ಲಿ ಕೊಡುವುದು ವಿಕಿರ ಪ್ರಕಿರಗಳು ಎಂದಿದ್ದಾರೆ. ವಾಯುಸಪಿಂಡ ಎಂಬುದು ಬೋಧಾಯನ ಧರ್ಮಸೂತ್ರದಲ್ಲಿ ಹೇಳಿರುವ ಮಾತು. ವಾಯಸ ಪಿಂಡ ಎಂದರೆ ಕಾಗೆಗಳಿಗಾಗಿ ಕೊಡುವ ಪಿಂಡ ಎಂದರ್ಥ. ಇಲ್ಲಿ ಕಾಗೆಗಳಿಗೆ ಎಂದು ಏಕೆ ಅರ್ಥಮಾಡಬೇಕು? ಪಿತೃಗಳಿಗೆ ಎಂದು ಅರ್ಥವಲ್ಲವೇ? ಎಂದರೆ, ಪಿತೃಗಳು ಕಾಗೆಗಳ ರೂಪದಲ್ಲಿ ಬರುತ್ತಾರೆಂದು ಅರ್ಥಮಾಡಿದ್ದಾರೆ. ಈ

ವಾಯಸಪಿಂಡ, ವಿಕಿರ, ಪ್ರಕಿರಗಳನ್ನು ಹೊರಕ್ಕೆ ಹಾಕಿ ಪಾದಪ್ರಕ್ಷಾಳನೆ ಮಾಡಿ ಆಚಮನ ಮಾಡಬೇಕು. ವಿಕಿರ ಪ್ರಕಿರಗಳನ್ನು ಭೋಜನ ಪಾತ್ರದ ಸಮೀಪದಲ್ಲಿ ಹಾಕುವಂತೆ, ಪಿಂಡಪ್ರದಾನವಾದ ಮೇಲೆ ಪಿಂಡಗಳ ಹತ್ತಿರದಲ್ಲಿಯೂ ವಿಶ್ವೇದೇವ -ಸಂಬಂಧವಾದ , ಪೈತೃಕವಾದ, ಮತ್ತು ವಿಷ್ಣು ಸಂಬಂಧವಾದ ವಿಕಿರ ಪ್ರಕಿರಗಳನ್ನು ಹಾಕುವ ಪದ್ಧತಿಯೂ ಇದೆ. ಈ ಪ್ರಯೋಗದಲ್ಲಿ ಎರಡೂ ಬಳಿ ಮುದ್ರಿಸಿದೆ. ಆದರೆ ಅವರವರ ಪದ್ಧತಿಯಂತೆ ಒಂದು ಸಾರಿ ಮಾತ್ರ ಆಚರಿಸಬೇಕು. ಇದನ್ನೇ ಉಚ್ಛಿಷ್ಟದ ಸಮೀಪದಲ್ಲಿ ಕೊಡುವುದರಿಂದ ಉಚ್ಛಿಷ್ಟ ಪಿಂಡ ಎಂದೂ ಕರೆಯುತ್ತಾರೆ.

ವಿಪ್ರರು ಭೋಜನವಾದ ಮೇಲೆ ಕರ್ತೃವಿನ ಪ್ರಾರ್ಥನೆಯಂತೆ ತಾವು ಊಟ ಮಾಡಿ ಮಿಗಿಸಿರುವ ಎಲ್ಲಾ ಪದಾರ್ಥಗಳಿಂದ ಸ್ವಲ್ಪ ಸ್ವಲ್ಪ ತೆಗೆದುಕೊಂಡು, ''ಯಜಮಾನರ ಕುಲದಲ್ಲಿ ತೀರಿಹೋದ ಅನ್ನಾಪೇಕ್ಷಿಗಳಾದ ದಾಸ ದಾಸಿಯರಿಗೆ ತೃಪ್ತಿಯಾಗಲಿ'', ಎಂದು 'ವಿಶ್ವೇದೇವರು ಬಲದಲ್ಲಿಯೂ, ಪಿತೃಗಳು ಎಡದಲ್ಲಿಯೂ, ಅರ್ಪಿಸಬೇಕು. ಇದು ಉಚ್ಛಿಷ್ಟರೂಪವಾದ ಪಿಂಡ.

## – ಪಿಂಡಪ್ರದಾನಮ್ –

ಪಿಂಡಪ್ರದಾನವೂ ಶ್ರಾದ್ಧದಲ್ಲಿ ಮುಖ್ಯವಾದ ಕರ್ಮ. ಪಿತೃಗಳು ಪಿಂಡ ರೂಪದಲ್ಲಿರುತ್ತಾರೆಂದು ಶಾಸ್ತ್ರಪ್ರಮಾಣವಿದೆ. ಪ್ರಪ್ರಥಮವಾಗಿ ವರಾಹಸ್ವಾಮಿಯು ಪಿಂಡಗಳಲ್ಲಿ ಪಿತೃಗಳನ್ನು ಭಾವಿಸಿ ಅರ್ಚಿಸಿದ ವಿಷಯವನ್ನು ಮಹಾ ಭಾರತದ ಶಾಂತಿ ಪರ್ವದಲ್ಲಿ ಗಮನಿಸಬಹುದು. ಭೀಷ್ಮರು ತಮ್ಮ ತಂದೆ ಶಂತನುವಿನ ಶ್ರಾದ್ಧ ಸಮಯದಲ್ಲಿ ಪಿಂಡಪ್ರದಾನ ಮಾಡುವ ಸಂದರ್ಭ.

ಇದ್ದಕ್ಕಿದ್ದಂತೆ ಶಂತನುವಿನ ಕೈಗಳೇ ಗೋಚರಿಸುತ್ತವೆ. ಆದರೆ ಧರ್ಮಸೂಕ್ಷ್ಮವನ್ನು ಅರಿತ ಭೀಷ್ಮರು ನೇರವಾಗಿ ಕೈಗಳಿಗೆ ಪಿಂಡವನ್ನು ಕೊಡದೆ, ದರ್ಭೆಗಳ ಮೇಲೆ ಮಂತ್ರ ಪೂರ್ವಕವಾಗಿ ಇಡುತ್ತಾರೆ. ಆಗ ಶಂತನುವು ಸಂತೋಷಗೊಂಡು, ಕೋಪಿಸದೇ, ''ಇಚ್ಛಾ ಮರಣೆಯಾಗು'' ಎಂದು ಹರಸುತ್ತಾರೆ. ಎಂಬ ಹರಿವಂಶದ ಕತೆಯನ್ನು ಗಮನಿಸಬೇಕು.

ಪಿಂಡ ಎಂದರೆ, ಉಂಡೆ. ಈ ಪಿಂಡಕ್ಕೆ ತಿಲ, ಅನ್ನ, ನೀರು, ಬೆಲ್ಲ, ಮೊಸರು, ಹಾಲು, ಜೇನು, ತುಪ್ಪ, ಹೀಗೆ ಎಂಟು ದ್ರವ್ಯಗಳನ್ನು ಸೇರಿಸಬೇಕೆಂದು ಒಂದು ಪ್ರಮಾಣ.

ವಿಪ್ರರು ಊಟ ಮಾಡಿದ ಮೇಲೆ ಉಳಿದ ಎಲ್ಲಾ ಪಾಕದಿಂದಲೂ ಸ್ವಲ್ಪಸ್ವಲ್ಪ ಪಿಂಡಕ್ಕಾಗಿ ಸೇರಿಸಬೇಕೆಂದೂ ಪ್ರಮಾಣವಿದೆ. ಅನ್ನತಿಲಗಳಿಂದ ಶಿರವೂ, ದಧಿಯಿಂದ ಮೂಗೂ, ತುಪ್ಪದಿಂದ ಕಿವಿಯೂ, ಬೆಲ್ಲದಿಂದ ಬಾಹುಗಳೂ, ಹಾಲಿನಿಂದ ಹೃದಯವೂ ಜೇನಿನಿಂದ ರೋಮಗಳೂ ನೀರಿನಿಂದ ಕೈಕಾಲುಗಳೂ, ಉದ್ಧವಿಸುತ್ತವೆಂದು ಭಾವಿಸಿ, ಆಗ್ನೇಯಾಭಿಮುಖವಾಗಿ ಕರ್ತೃವು ಕುಳಿತು ಎಡಮಂಡಿಯೂರಿ, ಭೂಮಿಯನ್ನು ಪ್ರೋಕ್ಷಿಸಿ, ರೇಖೆಮಾಡಿ, ದರ್ಭಮುಷ್ಟಿಯನ್ನು ಮೆತ್ತಗಿರುವಂತೆ ಹರಡಿ, ಮೂರು ಜಾಗಕ್ಕೆ ದಕ್ಷಿಣಕ್ಕೆ ಮುಗಿಯುವಂತೆ ಎಳ್ಳು ನೀರು ಬಿಟ್ಟು, ನಂತರ, ಕ್ರಮವಾಗಿ, ಪಿತೃ ಪಿತಾಮಹ, ಪ್ರಪಿತಾಮಹರ, ಹೆಸರು, ಗೋತ್ರ, ರೂಪಗಳನ್ನು ಸಂಭೋಧನ ಪ್ರಥಮಾ ವಿಭಕ್ತಿಯಿಂದ ನಿರ್ದೇಶಿಸಿ, ನಿಮ್ಮನ್ನು ಅನುಸರಿಸುವವರು ಬೇರೆಯಾರು ಇದ್ದಾರೆಯೋ ಅವರನ್ನೂ ಸಂಭೋಧಿಸಿ, ನಂತರ, ಸಂಬಂಧ ಹೆಸರು, ಗೋತ್ರ, ರೂಪಗಳನ್ನು ಚತುರ್ಥೀ ವಿಭಕ್ತಿಯಿಂದ ತಿಳಿಸಿ, ಹಿಂಬಾಲಿಸುವವರಿಗೂ ಸಹ, ಈ ಪಿಂಡವು ಅರ್ಪಿತವಾಗಲೆಂದು ಇಟ್ಟು, ಸಾಕ್ಷಾತ್ ಗಯೆಯಲ್ಲಿಯೇ ಕೊಟ್ಟಿದ್ದೇನೆಂದೂ, ಗದಾಧರನು ಸುಪ್ರೀತನಾಗಲಿ ಎಂದೂ, ವಿಪ್ರರನ್ನು ಪ್ರಾರ್ಥಿಸಬೇಕು. ನಂತರ ಮೂರನ್ನು ಸೇರಿಸಿ, ಗೂಳಿಗಳಂತೆ ಸಂತೃಪ್ತರಾಗಿರಿ ಎಂದು ಪ್ರಾರ್ಥಿಸಿ, ನಂತರ ಬಲಭಾಗದಿಂದ ಉತ್ತರಕ್ಕೆ ಕೊಂಚ ಉಸಿರು ಕಟ್ಟಿ ತಿರುಗಿ, ಅನ್ನದ ಸ್ವಲ್ಪ ಭಾಗವನ್ನು ತೆಗೆದು ಭಕ್ಷಿಸಬೇಕು. ಅಥವ ಮೂಸಿ ನೋಡಿ ತ್ಯಾಗ ಮಾಡಿ ಆಚಮನ ಮಾಡಬೇಕು.

ಪ್ರತಿಸಾಂವತ್ಸರಿಕ ಶ್ರಾದ್ಧದಲ್ಲಿ ಪಿಂಡಗಳು ಸುಲಿದ ತೆಂಗಿನ ಕಾಯಿ ಪ್ರಮಾಣವಾಗಿರಬೇಕೆಂದು ಹೇಳುತ್ತಾರೆ.

## – ಪಿಂಡಗಳನ್ನು ಬಿಡುವುದಕ್ಕೆ ಪ್ರಮಾಣ –

ಪಿಂಡಾಸ್ತು ಗೋಽಜ ವಿಪ್ರೇಭ್ಯೋ ದದ್ಯಾದಗ್ನೌ ಜಲೇಪಿ ಚ|

ನಿಕ್ಷಿಪೇಚ್ಚ ಶುಚೌ ದೇಶೇ ವಾಯುಸೇಭ್ಯೋ ನಿವೇದಯೇತ್||
(ಯಾಜ್ಞವಲ್ಕ್ಯ:)

ಒಂದೇ ದಿನ ಎರಡು ಶ್ರಾದ್ಧಗಳು ಒದಗಿದಾಗ ಒಂದಾದ ಮೇಲೆ ಮತ್ತೊಂದನ್ನು ಪುನಃ ಸ್ನಾನ ಮಾಡಿ ಮಾಡಬೇಕಾಗುತ್ತದೆ. ಮೊದಲನೆಯ ಶ್ರಾದ್ಧ

ಪ್ರಸಾದವನ್ನು ಸ್ವೀಕರಿಸದೇ ಇರಬಾರದೆಂದು. ಕೊಂಚ ತಿನ್ನುವುದು ಅಥವಾ ಮೂಸಿನೋಡುವುದು ಪದ್ಧತಿಯಾಗಿ ಬಂದಿದೆ ಎಂದು ಕೆಲವರ ಅಭಿಪ್ರಾಯ.

ತಿಲಮನ್ನಂ ಚ ಪಾನೀಯಂ ಗುಡಂ ದಧಿ ಪಯಸ್ತಥಾ।

ಮಧು ಸರ್ಪಿಸಮಾಯುಕ್ತಂ ಅಷ್ಟಾಂಗಂ ಪಿಂಡಲಕ್ಷಣಮ್''

ಪಾಣಿ ಹೋಮದ ಉಳಿದ ಅನ್ನ, ಕಲಶೋದಕ, ಪಾಣಿಹೋಮದ ಉಳಿದ ತುಪ್ಪ.

ಯದ್ಯದ್ಭುಕ್ತಂತತಃ ಕಿಂಚಿತ್ ಕಿಂಚಿತ್ ಪಿಂಡಾರ್ಥಮುದ್ಧರೇತ್।

ಪಿತೃಯಜ್ಞಚರೋರನ್ನಂ ಉದ್ಧೃತಂ ಪ್ರಕ್ಷಿಪೇದಥ॥

## – ಹಸ್ತಶುದ್ಧಿಃ –

ವಿಪ್ರರ ಭೋಜನ ವಾದ ಮೇಲೆ, ಆಚಮನವಾದ ಮೇಲೆ, ವಿಕಿರಾದಿಗಳನ್ನು ಮುಗಿಸಿ, ಪಿಂಡಗಳನ್ನು ವಿಸರ್ಜನೆ ಮಾಡಿ, ಮೊದಲು ಪಿತೃಸ್ಥಾನದ ವಿಪ್ರರಿಗೆ, ಜಲ ತಿಲ, ಜಲ, ದರ್ಭೆ ಜಲ, ಅಕ್ಷತಗಳನ್ನು ಕೊಡುವುದು.

ನಂತರ ವಿಶ್ವೇದೇವಸ್ಥಾನದ ವಿಪ್ರರಿಗೆ, ಜಲ ಯವ ಜಲ, ದರ್ಭೆ, ಜಲ ಅಕ್ಷತಗಳನ್ನು ಕೊಟ್ಟು ಅಭಿವಾದನ ಪೂರ್ವಕವಾಗಿ ಪ್ರಣಾಮ ಸಲ್ಲಿಸಿ, ಆಶೀರ್ಮಂತ್ರಾಕ್ಷತೆಗಳನ್ನು ಪಡೆದುಕೊಳ್ಳುವುದು.

## – ಸ್ವಸ್ತಿ ಸ್ವಧಾ–ಅಕ್ಷಯ್ಯಪ್ರಾರ್ಥನೆ –

ಓಂ ಸ್ವಸ್ತಿ ಚ ನಮಃ ಸ್ವಾಹಾ ಸ್ವಧಾತ್ವಂ ದಕ್ಷಿಣಾ ತಥಾ।

ನಿರೂಪಿತಾಶ್ಚತುರ್ವೇದೇ ಷಟ್ ಪ್ರಶಸ್ತಾಶ್ಚ ಕರ್ಮಿಣಾಮ್॥

ಕರ್ಮಮಾರ್ಗದಲ್ಲಿ ತೊಡಗಿದವರಿಗೆ

ಓಂ, ಸ್ವಸ್ತಿ, ನಮಃ ಸ್ವಾಹಾ, ಸ್ವಧಾ, ದಕ್ಷಿಣಾ

ಈ ಆರೂ ಅತ್ಯಂತ ಪ್ರಶಸ್ತವಾದವುಗಳು. ಇವುಗಳಲ್ಲಿ ಸ್ವಸ್ತಿ, ಸ್ವಧಾ,ಶಬ್ದಗಳನ್ನು ಶ್ರಾದ್ಧದಲ್ಲಿ ಉಚ್ಚರಿಸುವುದು ಅತ್ಯಂತ ಶ್ರೇಷ್ಠವೆಂದು ಬ್ರಹ್ಮವೈವರ್ತ ಪುರಾಣದಲ್ಲಿ ಹೇಳಿದ್ದಾರೆ. ಸ್ವಸ್ತಿ ಎಂದರೆ, ಒಳ್ಳೆಯದು, ಮಂಗಳ, ಎಂದರ್ಥ. ಸ್ವಸ್ತಿ ಶಬ್ದದಿಂದ ಕೂಡಿದ ಋಗ್ವೇದದ ''ಸ್ವಸ್ತಿನೋ

ಮಿಮೀತಾಂ'' ಮುಂತಾದ ಸೂಕ್ತಗಳು ಮಂಗಳಸೂಚಕಗಳಾಗಿವೆ. ''ಸ್ವಸ್ತಿ'' ''ಸ್ವಸ್ತಿ'' ಎಂದು ಹೇಳಿ ಎಂದು ವಿಪ್ರರನ್ನು ಪ್ರಾರ್ಥಿಸಿ, ಅವರು ಹೇಳಿದ ಸ್ವಸ್ತಿ ಶಬ್ದಗಳನ್ನು ಕೇಳಿ ಸಂತೃಪ್ತರಾಗಬೇಕು.

ಸ್ವಧಾ-ಎಂಬುದು ಸ್ತ್ರೀವಾಚಕಶಬ್ದ, ಪಿತೃಗಳ ಪತ್ನಿಯೇ ಸ್ವಧಾದೇವಿ, ಸ್ವಧೋಪಾಖ್ಯಾನವನ್ನು ಶ್ರಾದ್ಧಸಮಯದಲ್ಲಿ ಹೇಳಿದರೆ ಮಹತ್ ಪುಣ್ಯವೆಂದಿರುತ್ತಾರೆ.

ಸ್ವಧಾ ಸ್ವಧಾ ಸ್ವಧೇತ್ಯೇವಂ ಯದಿ ವಾರತ್ರಯಂಸ್ಮರೇತ್।

ಲಭೇತ್ ಶ್ರಾದ್ಧ ಶತಾನಾಂಚ ಪುಣ್ಯ ಮೇವ ನ ಸಂಶಯಃ॥

ಎಂದು ಹೇಳಿದ್ದಾರೆ, ಮತ್ತು ಸ್ವಧಾದೇವಿಯನ್ನು

ಪಿತೃಣಾಂ ಪ್ರಾಣತುಲ್ಯಾತ್ವಂ ದ್ವಿಜ ಜೀವನ ರೂಪಿಣೀ।

ಶ್ರದ್ಧಾಧಿಷ್ಠಾತೃದೇವೀ ಚ ಶ್ರಾದ್ಧಾದೀನಾಂ ಫಲಪ್ರದಾ॥

ಎಂದು ಪ್ರಾರ್ಥಿಸಬೇಕು.

ನಾನು ಈ ಶ್ರಾದ್ಧದಲ್ಲಿ ಕೊಟ್ಟ ಅನ್ನೋದಕಾದಿಗಳು ಅಕ್ಷಯ್ಯವಾಗಲೆಂದು ಅನುಗ್ರಹಿಸಿರಿ ಎಂದು ಪಿತೃಗಳನ್ನು ಬೇಡಿ, ಅವರಿಂದ ''ಅಕ್ಷಯವಾಯಿತೆಂದು'' ಪ್ರತಿವಚನವನ್ನು ಪಡೆಯಬೇಕು.

## – ನಿಮಂತ್ರಿತ ವಿಪ್ರರನ್ನು ಬೇಡುವುದು –

ನಮ್ಮ ಪಿತೃಗಳು ಶಾಂತರಾಗಿರಲಿ, ನಮ್ಮ ವಂಶದಲ್ಲಿ ದಾನಿಗಳು ಹೆಚ್ಚಲಿ. ವೇದಾಧ್ಯಾಯಿಗಳು ಹೆಚ್ಚಲಿ, ಶ್ರದ್ಧೆಯು ಎಂದಿಗೂ ಕುಂದುವುದು ಬೇಡ. ನಾವು ಹೆಚ್ಚು ಹೆಚ್ಚು ದಾನ ಮಾಡುವಂತಾಗಲಿ, ನಮಗೆ ದವಸ ಧಾನ್ಯಗಳು ವೃದ್ಧಿಯಾಗಲಿ, ನಮ್ಮಲ್ಲಿಗೆ ಅತಿಥಿಗಳು ಅಧಿಕವಾಗಿ ಬರುತ್ತಿರಲಿ, ನಮ್ಮನ್ನು ಬೇಡುವವರು ಹೆಚ್ಚಾಗಲಿ, ನಾವು ಯಾರನ್ನೂ ಬೇಡದಂತೆ ಅನುಗ್ರಹಿಸಿರಿ, ಎಂದು ಪ್ರಾರ್ಥಿಸಬೇಕು. ನಿಮ್ಮ ಇಷ್ಟಗಳೆಲ್ಲವೂ ಪೂರ್ಣವಾಗಿ ನೆರವೇರಲೆಂದು ಪ್ರತಿವಚನವನ್ನು ಹೇಳಬೇಕು.

## – ಕರ್ಮಸಮರ್ಪಣ –

ನಾನು ಮಾಡಿದ ಪಾಣಿಹೋಮ, ಬ್ರಾಹ್ಮಣಭೋಜನ, ಪಿಂಡ ಪ್ರದಾನಾತ್ಮಕವಾದ ಈ ಪಿತೃಯಜ್ಞವು ವಾಸುದೇವನಿಗೆ ಅರ್ಪಿತವಾಗಲೆಂದು

ಸೀರನ್ನು ಬಿಟ್ಟು ಲೋಪದೋಷಪ್ರಾಯಶ್ಚಿತ್ತಕ್ಕಾಗಿ ನಾಮತ್ರಯ ಮಂತ್ರ ಜಪ ಮಾಡಬೇಕು.

ಅಚ್ಯುತಃ ಕಲ್ಪವೃಕ್ಷಸ್ಸ ಅನಂತಃ ಕಾಮಧೇನವಃ।

ಚಿಂತಾಮಣಿಸ್ತು ಗೋವಿಂದಃ ನಾಮತ್ರಯ ಮುದಾಹೃತಮ್॥ ಅಚ್ಯುತ ಎಂಬ ಮಂತ್ರವು ಕಲ್ಪವೃಕ್ಷ, ಅನಂತವೆಂಬ ಮಂತ್ರವು ಕಾಮಧೇನುಗಳು. ಗೋವಿಂದ ಎಂಬ ಮಂತ್ರವು ಚಿಂತಾಮಣಿಯೆಂದೂ ಭಾವಿಸಿ, ಜಪಿಸಿದರೆ ಸಕಲ ದೋಷಗಳು ನಿವಾರಣೆಯಾಗುವುದು.

## – ಆಸೀಮಾಂತಮನುವ್ರಜನಮ್ –

ವಿಪ್ರರನ್ನು ಎಷ್ಟು ಆದರ, ಪ್ರೀತಿ, ವಿಶ್ವಾಸ, ಶ್ರದ್ಧಾಭಕ್ತಿಪುರಸ್ಸರವಾಗಿ ಆಹ್ವಾನಿಸಿ, ಪಿತೃಯಜ್ಞವನ್ನು ಆಚರಿಸಿದ್ದೇವೆಯೋ, ಹಾಗೆಯೇ ಪ್ರೀತ್ಯಾದರಾದಿಗಳಿಂದ ಅವರ ಜೊತೆಯಲ್ಲಿ ಹೊರಟು ಅವರ ಪಾದಧೂಳಿ ತಮ್ಮ ಬಟ್ಟೆಯ ಮೇಲೆಯೇ ಬೀಳಲೆಂದು ನೆಲದಲ್ಲಿ ಹೊದೆದ ಬಟ್ಟೆ ಹಾಸಿ, ಅವರ ಮೇಲೆಯೇ ಅವರನ್ನು ನಡೆಸುತ್ತಾ, ತಮ್ಮ ಮನೆಯ ಬಾಗಿಲವರೆಗೆ ಹೋಗಿ, ಅವರನ್ನು ಬೀಳ್ಕೊಡುವುದು ಹಾಗೂ ಆಶೀರ್ವಾದ ಪಡೆಯುವುದು.

## – ಪರೇಹನಿತರ್ಪಣ –

ಶ್ರಾದ್ಧದ ಮರುದಿನದ ವರೆಗೂ ನಿಯಮದಿಂದ ಇದ್ದು ಸೂರ್ಯೋದಯಾತ್ ಪೂರ್ವದಲ್ಲಿಯೇ ಕರ್ತೃವು ಪಿತ್ರಾದಿ (ಮಾತ್ರಾದಿ) ಮೂವರಿಗೆ ಮಾತ್ರ ತಿಲತರ್ಪಣವನ್ನು ಕೊಡಬೇಕು. ಇದು ತಂದೆ ತಾಯಿಗಳ ವಿಷಯದಲ್ಲಿ ಮಾತ್ರ.

ಶ್ರಾದ್ಧಾಂಗ ತರ್ಪಣಂ ಕುರ್ಯಾತ್ ಸತಿಲಂ ತು ಪರೇಹನಿ।

ಪಿತ್ರೋರ್ವಿಷಯ ಏವ ಸ್ಯಾತ್ ನಚಾನ್ಯವಿಷಯೋ ಭವೇತ್॥

ತೀರ್ಥಶ್ರಾದ್ಧ, ಗಯಾಶ್ರಾದ್ಧ ಪ್ರೇತಶ್ರಾದ್ಧ ಅನುಮಾಸಿಕ ಶ್ರಾದ್ಧಗಳು, ಅಬ್ದವಿಮೋಕಶ್ರಾದ್ಧ, ಸಪಿಂಡೀಕರಣಶ್ರಾದ್ಧ, ಪ್ರಥಮಾಬ್ದಿಕ ಶ್ರಾದ್ಧ, ಮತ್ತು ವೃದ್ಧಿಶ್ರಾದ್ಧಗಳಲ್ಲಿ ತಿಲತರ್ಪಣವನ್ನು ಮಾಡಬಾರದು.

ತೀರ್ಥಶ್ರಾದ್ಧೇ ಗಯಾಶ್ರಾದ್ಧೇ ಪ್ರೇತಶ್ರಾದ್ಧೇಽನುಮಾಸಿಕೇ।

ಸಪಿಂಡೀಕರಣೇ ಚೈವ ನಕುರ್ಯಾತ್ ತಿಲತರ್ಪಣಮ್॥

ವೃದ್ಧಿಶ್ರಾದ್ಧೇ ಸಪಿಂಡ್ಯಾಂ ಚ ಮಾಸಿಕೇ ಚಾನುಮಾಸಿಕೇ।

ಅಬ್ದಕೇಪ್ರಥಮೇ ಚೈವ ನಕುರ್ಯಾತ್ತಿಲ ತರ್ಪಣಮ್॥

ಸಂವತ್ಸರ ವಿಮೋಕೇಚ ನಕುರ್ಯಾತ್ತಿಲ ತರ್ಪಣಮ್॥

ಜೀವಮಾನ: ಪಿತಾ ಯಸ್ತು ಮಾತಾಯದಿ ವಿಪದ್ಯತೇ।

ಮಾತುಃ ಶ್ರಾದ್ಧಂ ಸುತಃ ಕುರ್ಯಾತ್ ನಕುರ್ಯಾತ್ತಿಲ ತರ್ಪಣಮ್॥

ತಂದೆಯು ಬದುಕಿದ್ದು ತಾಯಿಯು ಮೃತಳಾಗಿದ್ದರೆ, ಶ್ರಾದ್ಧವನ್ನು ಮಗನೇ ಮಾಡಬೇಕು. ಅವನು ತಿಲತರ್ಪಣ ಮಾಡಬಾರದು.

### ಕೆಲವು ಸೂಚನೆಗಳು

1.[ ] ಈ ಗುರುತು ಬ್ರಾಹ್ಮಣರ ಪ್ರತ್ಯುತ್ತರವನ್ನು ತಿಳಿಸುತ್ತದೆ.

2.( )ಈ ಗುರುತು ಕರ್ತೃವಿಗೆ, ಸೂಚನೆ.

3. ಯವ ಜವೆ ಗೋಧಿಯಂತಹ ಧಾನ್ಯ. (ಅದರ ಸ್ಥಾನದಲ್ಲಿ ನೆನೆದ ಅಕ್ಕಿಯನ್ನು ಉಪಯೋಗಿಸಲಾಗುತ್ತಿದೆ. ಅಕ್ಷತೆ ಎಂದರೂ ಇದೇ. ಪ್ರಾಗ್ದಕ್ಷಿಣಾ ಆಗ್ನೇಯ ದಿಕ್ಕು)

4. ಗೋತ್ರವನ್ನು ಹೇಳುವಾಗ "ಸ" ಎಂಬ ಅಕ್ಷರವನ್ನು ಸೇರಿಸಿಹೇಳಬೇಕು. ಉದಾ. ಕಾಶ್ಯಪಸ ಗೋತ್ರ:

5. ಪುರುಷರ ಹೆಸರಿನ ಕೊನೆಯಲ್ಲಿ ಶರ್ಮಾ ಎಂದು ಸೇರಿಸಿ ಹೇಳಬೇಕು. ಉ.ದಾ. ರಾಮಶರ್ಮಾ, ಸ್ತ್ರೀಯರ ಹೆಸರಿನ ಕೊನೆಯಲ್ಲಿ "ದೇವೀ" ಶಬ್ದ ಅಥವಾ "ದಾ" ಎಂದು ಸೇರಿಸಬೇಕು. ಎರಡನ್ನೂ ಸೇರಿಸುವ ಪದ್ಧತಿಯೂ ಇದೆ.

ಉದಾ. ಗೌರೀ ದೇವೀ.

ಪಾರ್ವತೀ ದಾ

ರಮಾ ದೇವೀದಾ.

6. ಯಜಮಾನಃ ಎಂಬುದು ಪುಲ್ಲಿಂಗ

ಯಜಮಾನಾ ಎಂಬುದು ಸ್ತ್ರೀಲಿಂಗ.

# - ಗಯಾ ಮಹಾತ್ಮ್ಯಮ್ -

ಗಯಾಕ್ಷೇತ್ರವು ಬಿಹಾರ ರಾಜ್ಯದ ಪಾಟ್ನಾ ಬಳಿ ಇರುವ ಒಂದು ಪುಣ್ಯ ಕ್ಷೇತ್ರ. ಇದು ಪರಮ ಪವಿತ್ರವಾದ ಫಲ್ಗು ನದಿಯ ತೀರ ದಲ್ಲಿದೆ. ಪ್ರತಿವರ್ಷವೂ ಲಕ್ಷಾಂತರ ಯಾತ್ರಾರ್ಥಿಗಳು ಅಲ್ಲಿ ಶ್ರಾದ್ಧಾದಿ ಕರ್ಮಗಳನ್ನು ಆಚರಿಸಿ, ಕೃತಾರ್ಥರಾಗುತ್ತಾರೆ. ಇಂದಿಗೂ, ಆಸ್ತಿಕರು ಸ್ವಗೃಹದಲ್ಲಿ ಶ್ರಾದ್ಧಾದಿ ಕರ್ಮಗಳನ್ನು ಆಚರಿಸುವಾಗ ಅದನ್ನು ಗಯಾಕ್ಷೇತ್ರವೆಂದೇ ಭಾವಿಸುತ್ತಾರೆ. ಗದಾಧರನು ಸುಪ್ರೀತನಾಗಲಿ ಎಂದು ಪ್ರಾರ್ಥಿಸುತ್ತಾರೆ ಸ್ಮರಿಸಲು ಕಾರಣವೇನೆಂದರೆ, ವಾಯುಪುರಾಣದಲ್ಲಿ ಗಯೆಯ ಮಹಿಮೆಯನ್ನು ಹೀಗೆ ಕೊಂಡಾಡಿದ್ದಾರೆ.

ಹಿಂದೆ ಸೃಷ್ಟಿಕರ್ತನಾದ ಬ್ರಹ್ಮನು ಈ ವಿಚಿತ್ರ ಪ್ರಪಂಚವನ್ನು ಸೃಷ್ಟಿಸುತ್ತಾ, ಒಬ್ಬ ಪ್ರಭಾವಶಾಲಿಯಾದ ಅಸುರನನ್ನು ಸೃಷ್ಟಿಸಿದನು. ಅವನೇ ಗಯಾಸುರ. ಅವನು ಬೆಳೆಯುತ್ತಲೇ ತಾನು ಪರಮ ಪವಿತ್ರನೂ ಪ್ರಭಾವಶಾಲಿಯೂ ಆಗಬೇಕೆಂಬ ಆಸೆಯಿಂದ ಕೋಲಾಹಲ ಪರ್ವತದಲ್ಲಿ ಘೋರವಾದ ತಪಸ್ಸನ್ನಾಚರಿಸಿದನು. ಅವನ ತಪಸ್ಸಿಗೆ ದೇವತೆಗಳೆಲ್ಲರೂ ತತ್ತರಿಸಿದರು. ಇಂದ್ರನಿಗಂತೂ ತನ್ನ ಸ್ಥಾನಕ್ಕೆ ಚ್ಯುತಿಯುಂಟಾದೀತೆಂದು ಭಯವು ಆವರಿಸಿತು. ಆಗ ಇಂದ್ರಾದಿ ಸಕಲ ದೇವತೆಗಳೂ ಬ್ರಹ್ಮನೊಡಗೂಡಿ ವಿಷ್ಣುವನ್ನೇ ಮರೆ ಹೊಕ್ಕರು. ಹಾಗೂ ತಮ್ಮ ಕಷ್ಟವನ್ನು ವಿವರಿಸಿದರು.

ಆಗ ಪ್ರಸನ್ನನಾದ ವಿಷ್ಣುವು, ಗಯಾಸರನಲ್ಲಿಗೆ ಬಂದು, ಅವನನ್ನು ಎಚ್ಚರಗೊಳಿಸಿ, ಬೇಕಾದ ವರವನ್ನು ಕೇಳು-ಎಂದನು. ಆಗ ಗಯಾಸರನು - ಸ್ವಾಮಿ, ನನ್ನ ಸ್ಪರ್ಶ ಮಾತ್ರದಿಂದ ಸುರಾಸುರ ಮೊದಲುಗೊಂಡು ಸಕಲ ಪ್ರಾಣಿವರ್ಗವೂ ಪರಮ ಪವಿತ್ರವಾಗಿ ಮೋಕ್ಷವನ್ನೇ ಪಡೆಯಬೇಕು. ಇದೇ ನನ್ನ ತಪಸ್ಸಿನ ಉದ್ದೇಶ ಎಂದನು. ಆಗ ವಿಷ್ಣುವು ಹಾಗೆಯೇ ಆಗಲೆಂದು ಹರಸಿದನು.

ಇದರ ಪರಿಣಾಮವಾಗಿ, ಯಮನಿಗೂ, ಅವನ ಅಧಿಕಾರಿಗಳಿಗೂ, ಕೆಲಸವೇ ಇಲ್ಲದಂತಾಗಿ ನರಕವು ಶೂನ್ಯವಾಯಿತು. ಆಗ ಯಮನು, ಇಂದ್ರ, ಬ್ರಹ್ಮಾದಿಗಳ ನೇತೃತ್ವದಲ್ಲಿ ವಿಷ್ಣುವನ್ನು ಮರೆಹೊಕ್ಕು, ತಮ್ಮ ಸ್ಥಿತಿಯನ್ನು ವಿವರಿಸಿದನು. ಆಗ ವಿಷ್ಣುವು ಬ್ರಹ್ಮನನ್ನು ಕುರಿತು, ನೀವೆಲ್ಲರೂ ಸೇರಿ, ಒಂದು ಪವಿತ್ರವಾದ

ಯಾಗವನ್ನು ಗಯಾಸುರನ ಮೇಲೆ ಆಚರಿಸಿರಿ," ಎಂದು ಪರಿಹಾರ ಹೇಳಿದನು. ಆಗ ಬ್ರಹ್ಮನು ಗಯಾಸುರನಲ್ಲಿಗೆ ಬಂದು, "ಅಸುರನೇ ನಾವೆಲ್ಲರೂ ಒಂದು ಮಹಾಯಾಗವನ್ನು ಆಚರಿಸಬೇಕೆಂದಿರುತ್ತೇವೆ. ಅದಕ್ಕೆ ಅರ್ಹವಾದ ಪವಿತ್ರವಾದ ಸ್ಥಳ ಎಲ್ಲಿಯೂ ಕಾಣಿಸುತ್ತಿಲ್ಲ. ಆದುದರಿಂದ ಪರಮ ಪವಿತ್ರನೂ, ಸರ್ವರನ್ನೂ ಪವಿತ್ರಗೊಳಿಸುವವನೂ, ಆದ ನಿನ್ನ ಮೇಲೆಯೇ ಆ ಯಾಗವನ್ನು ಆಚರಿಸಬೇಕೆಂದು ಸಂಕಲ್ಪಿಸಿದ್ದೇವೆ. ನೀನು ಸಮ್ಮತಿಸುವೆಯಾ? ಎಂದು ಕೇಳಿಕೊಂಡರು.

ಆಗ ಆ ಅಸುರನು ಬ್ರಹ್ಮಾದಿಗಳು ಆಚರಿಸುವ ಯಾಗದಿಂದ ತಾನು ಮತ್ತೂ ಪವಿತ್ರನಾಗುವೆನೆಂದು ಒಪ್ಪಿಕೊಂಡನು. ಆಗ ಸಕಲ ದೇವತೆಗಳೂ ಋಷಿವರ್ಯರೂ ಸೇರಿ, ಉತ್ತರಕ್ಕೆಶಿರ ಮಾಡಿ, ದಕ್ಷಿಣಕ್ಕೆ ಪಾದಮಾಡಿ ಮಲಗಿದ, ಗಯಾಸುರನ ಮೇಲೆಯೇ ಕುಂಡವನ್ನು ನಿರ್ಮಿಸಿ, ಯಜ್ಞವನ್ನು ಮಾಡಿ ಮುಗಿಸಿದರು. ಅವಭೃತ ಸ್ನಾನಕ್ಕಾಗಿ ಬ್ರಹ್ಮಸರಸ್ಸಿಗೆ ಎಲ್ಲರೂ ಹೋಗುತ್ತಿದ್ದಾಗ, ಯಜ್ಞಕುಂಡದಲ್ಲಿ ಆ ಅಸುರನು ಚಲಿಸುತ್ತಿದ್ದುದನ್ನು ಗಮನಿಸಿ, ಬ್ರಹ್ಮನು ಯಮಧರ್ಮರಾಜನನ್ನು ಕುರಿತು, "ಧರ್ಮರಾಜ, ನಿನ್ನ ಬಳಿಯಿರುವ ಧರ್ಮಶಿಲೆಯನ್ನು ಈ ಅಸುರನ ಶಿರದ ಮೇಲೆ ಸ್ಥಾಪಿಸು," ಎಂದನು. ಹಾಗೆ ಮಾಡಿದರೂ ಗಯಾಸುರನು ಸ್ತಬ್ಧನಾಗಲಿಲ್ಲ. ಆಗ ಎಲ್ಲರೂ ಪುನಃ ವಿಷ್ಣುವಿನ ಬಳಿ ಸಾರಿ, ಪ್ರಾರ್ಥಿಸಿದರು. ಆಗ ವಿಷ್ಣುವು ತನ್ನ ಪ್ರತಿಕೃತಿಯೊಂದನ್ನು ಸೃಷ್ಟಿಸಿ, "ಇದನ್ನು ಆ ಅಸುರನ ಮೇಲೆ ಸ್ಥಾಪಿಸಿರಿ" ಎಂದನು. ಆದರೆ ಅದೂ ವ್ಯರ್ಥವಾಯಿತು. ಆಗ ಮಹಾವಿಷ್ಣುವು ತಾನೇ ಗದಾಧರನಾಗಿ ಬಂದು, ಅವನನ್ನು ಗದೆಯಿಂದ ಮೆಟ್ಟಿ ನಿಂತನು. ಬ್ರಹ್ಮಾದಿ ಸಕಲ ದೇವತೆಗಳೂ ತಮ್ಮ ಪ್ರಭಾವವನ್ನು ಆತನ ಮೇಲೆ ಸೂಕ್ಷ್ಮವಾಗಿ ಬೀರಿದರು. ಈ ಎಲ್ಲರ ಪ್ರಭಾವದಿಂದಲೂ, ಪರಮ ಪವಿತ್ರನಾದ ಆ ಅಸುರನು ಅಚಲನಾದನು.

"ಇದರಿಂದ ಸಂತೋಷಗೊಂಡ ವಿಷ್ಣುವು ಬೇಕಾದವರವನ್ನು ಬೇಡು, ಕೊಡುತ್ತೇನೆ " ಎಂದನು.

ಆಗ ಅಸುರನು – "ಸ್ವಾಮಿ, ಸೂರ್ಯಚಂದ್ರರು ಇರುವವರೆಗೂ ಈ ನನ್ನ ಮೇಲೆ ಹಾಗೂ ಶಿಲೆಯ ಮೇಲೆ ಸಕಲ ದೇವತೆಗಳೂ ನೆಲೆಸಿರಬೇಕು. ಈ ತೀರ್ಥವು ನನ್ನ ಹೆಸರಿನಿಂದ ಪ್ರಖ್ಯಾತವಾಗಬೇಕು. ಇಲ್ಲಿ ಸ್ನಾನ, ದಾನ,

ತರ್ಪಣ, ಶ್ರಾದ್ಧಾದಿಕರ್ಮಗಳನ್ನು ಆಚರಿಸುವುದರಿಂದ ತಾವು ಮಾತ್ರವಲ್ಲದೆ, ಕುಲಕೋಟಿಯೂ ಉದ್ಧಾರವಾಗಬೇಕು.'' ಎಂದು ವರವನ್ನು ಕೇಳಿದನು. ಅಂದಿನಿಂದ ವಿಷ್ಣುವು ಗದಾಧರನೆಂದು ಪ್ರಖ್ಯಾತನಾದನು. ಆ ಕ್ಷೇತ್ರವು ಗಯಾ ಕ್ಷೇತ್ರವೆಂದು ಪ್ರಸಿದ್ಧವಾಯಿತು.

ಅನಂತರ ಬ್ರಹ್ಮನು ಬ್ರಾಹ್ಮಣರ ಸಮೂಹವನ್ನೇ ಸೃಷ್ಟಿಸಿ, ನೀವೆಲ್ಲರೂ ಯಾತ್ರೆಗಾಗಿ ಬಂದ ಯಾವ ಯಾತ್ರಿಗಳನ್ನೂ ಬೇಡ ಕೂಡದೆಂದೂ, ಅವರು ಮಾಡುವ ಶ್ರಾದ್ಧಾದಿ ಕರ್ಮಗಳಲ್ಲಿ ಭಾಗವಹಿಸಿ, ಅವರನ್ನು ಮನಃ ಪೂರ್ವಕವಾಗಿ ಹರಸಬೇಕು,'' ಎಂದು ಆಜ್ಞಾಪಿಸಿ, ಆ ವಿಪ್ರರಿಗೆ ಅಗತ್ಯವಾದ ಸಕಲ ಸಾಮಗ್ರಿಗಳನ್ನು ಅತಿಶಯವಾಗಿ ಸೃಷ್ಟಿಸಿ, ವಿಪ್ರರನ್ನು ಹರಸಿದನು. ಕೆಲವು ದಿನಗಳಲ್ಲಿಯೇ ವಿಪ್ರರು ಬ್ರಹ್ಮನ ಆಜ್ಞೆಯನ್ನು ಭಂಗಗೊಳಿಸಿ, ಯತ್ರಾರ್ಥಿಗಳನ್ನು ಪೀಡಿಸುತ್ತಾ, ಬ್ರಹ್ಮ ಶಾಪಕ್ಕೆ ಗುರಿಯಾಗಿ, ಸಕಲ ಸಮೃದ್ಧಿಯನ್ನೂ ಕಳೆದುಕೊಂಡು, ಯಾತ್ರಾರ್ಥಿಗಳನ್ನು ಕಾಡಿ, ಬೇಡಿ ಬಂದ ದ್ರವ್ಯದಿಂದಲೇ ಜೀವನ ಮಾಡತೊಡಗಿದರು. ಆದರೆ ಆಗಯಾವಾಳಿಗಳ ವಚನದಿಂದಲೇ ಯಾತ್ರಿಗಳು ಕೃತಾರ್ಥರಾಗುವರೆಂದೂ ಬ್ರಹ್ಮನೂ ಹರಸಿದನು.

ಆದುದರಿಂದಲೇ ಮಗನಾದವನು ಗಯಾಶ್ರಾದ್ಧವನ್ನು ಮಾಡಬೇಕು. ಅನೇಕ ಪುತ್ರರಿದ್ದರೆ ಒಬ್ಬನಾದರೂ ಗ್ರಯಾಶ್ರಾದ್ಧ ಮಾಡಿಯಾನು. ಎಂದು ಪೂರ್ವಜರು ಪ್ರಾರ್ಥಿಸುತ್ತಿದ್ದರು. ಅಲ್ಲಿ ಫಲ್ಗುನೀ ಶ್ರಾದ್ಧ, ವಿಷ್ಣು ಪಾದದಲ್ಲಿ ಪಿಂಡಪ್ರದಾನ, ವಟವೃಕ್ಷದ ಸಿರಳಲ್ಲಿ ಪಿಂಡಪ್ರದಾನ, ಈ ಮೂರೂ ಅತ್ಯಗತ್ಯ ಕರ್ತವ್ಯಗಳು. ಶಮೀ ಪತ್ರಪ್ರಮಾಣದ ಪಿಂಡಗಳನ್ನು ಗಯಾಸುರನ ತಲೆಯ ಮೇಲಿರುವ ಶಿಲೆಯ ಮೇಲಿಕೊಟ್ಟರೆ, ಸಪ್ತಗೋತ್ರಗಳೂ ನೂರೊಂದು ಕುಲಗಳೂ ಉದ್ಧಾರವಾಗುತ್ತವೆ, ಎಂದು ಹೇಳಿದ್ದಾರೆ, ತನ್ನ ಪಿತೃಗೋತ್ರ, ಮಾತಾಮಹರ ಗೋತ್ರ, ಅಳಿಯನಗೋತ್ರ, ಪಿತೃಭಗಿನೀ ಗೋತ್ರ, ಮಾತೃ ಭಗಿನೀ ಗೋತ್ರ, ಆತ್ಮಭಗಿನೀ ಗೋತ್ರ, ಹೆಣ್ಣು ಕೊಟ್ಟ ಮಾವನ ಗೋತ್ರ, ಇವೇ ಸಪ್ತ ಗೋತ್ರಗಳು.

ಪಿತೃ 24, ಮಾತಾಮಹರು 20, ಜಾಮಾತಾ 16, ಪಿತೃಭಗಿನೀ 10, ಮಾತೃಭಗಿನೀ 8, ಆತ್ಮಭಗಿನೀ 11, ಶ್ವಶುರ 12, ಹೀಗೆ ಒಟ್ಟು 101 ಕುಲಗಳು.

## – ಶ್ರಾದ್ಧಮಹಿಮೆ –

ಮಹಾತಪಸ್ವಿಗಳಾದ ವಿಶ್ವಾಮಿತ್ರರು ಘೋರತಪಸ್ಸನ್ನು ಆಚರಿಸುತ್ತಿದ್ದಾಗ, ಅವರ–ವಾಗ್ದುಷ್ಟ, ಕ್ರೋಧನ, ಹಿಂಸ್ರ, ಪಿಶುನ, ಕವಿ, ಖಸೃಮ, ಪಿತೃವರ್ತೀ ಎಂಬ ಏಳು ಕುಮಾರರು ಗಾರ್ಗ್ಯಮಹರ್ಷಿಗಳ ಹತ್ತಿರ ವಿದ್ಯಾಭ್ಯಾಸ ಮಾಡುತ್ತಿದ್ದರು. ಒಬ್ಬೊಬ್ಬರೂ ಮಹಾಮೇಧಾವಿಗಳು, ಹಾಗೂ ಜಿತೇಂದ್ರಿಯರು, ಹಾಗೂ ಕರ್ಮಾನುಷ್ಠಾನ ಪರರು.

ಒಂದು ದಿನ ಅವರು ಪಾಠ ಮುಗಿದ ಮೇಲೆ ಗುರುಗಳ ದನಕರುಗಳನ್ನು ಕಾಡಿನಲ್ಲಿ ಮೇಯಿಸಲು ಹೊಡೆದುಕೊಂಡು ಹೋದರು. ಬೇಸಗೆಯ ಬೇಗೆಯಿಂದ ಬಳಲಿದ ಅವರಿಗೆ ಎಂದೂ ಇಲ್ಲದ ಹಸಿವು ಬಹಳವಾಗಿ ಬಾಧಿಸತೊಡಗಿತು. ''ಭುಭುಕ್ಷಿತೋ ನ ಪ್ರತಿಭಾತಿ ಕಿಂಚಿತ್'' ಎಂಬಂತೆ ಅವರಿಗೆ ಏನು ಮಾಡಬೇಕೆಂದು ದಿಕ್ಕೇ ತೋಚಲಿಲ್ಲ. ದುರದೃಷ್ಟದಿಂದ ಗುರುಗಳ ಹಸುವನ್ನೇ ಕೊಂದು ತಿಂದು ಹಸಿವೆಯನ್ನು ಹೋಗಲಾಡಿಸಿಕೊಳ್ಳಬೇಕೆಂಬ ದುರ್ಬುದ್ಧಿಯು ಉದಯಿಸಿತು. ಅವರಲ್ಲಿ ಧರ್ಮ ಭೀರುಗಳಾದ ಕವಿ, ಮತ್ತು ಖಸೃಮರು, ಎಂದಿಗೂ ಇಂತಹ ಅಕಾರ್ಯವನ್ನು ಮಾಡಲೇಬಾರದೆಂದು ವಾದಿಸಿದರು. ಆದರೇನು? ಹಸುವನ್ನೇ ಭಕ್ಷಿಸಬೇಕೆಂದು ಐವರ ವಾದ. ಇಂತಹ ಸಂದರ್ಭದಲ್ಲಿ ಕೊನೆಯವನಾದ ಪಿತೃವರ್ತಿಯು ''ಗೋವನ್ನು ತಿನ್ನಬೇಕೆಂದೇ ನಿಶ್ಚಯ್ಸಿಸುವುದಾದರೆ, ಅದನ್ನು ಶ್ರಾದ್ಧರೂಪದಲ್ಲಿ ಪಿತೃಗಳಿಗೆ ಸಮರ್ಪಿಸಿ, ಪ್ರಸಾದರೂಪವಾಗಿ ಭಕ್ಷಿಸಿದರೆ, ದೋಷವಿಲ್ಲವೆಂದು ವಾದಿಸಿದನು. ಈ ವಾದವನ್ನು ಎಲ್ಲರೂ ಒಪ್ಪಿದರು. ಆಮೇಲೆ ಗೋವನ್ನು ಶ್ರಾದ್ಧನಿಮಿತ್ತವಾಗಿ ವಿನಿಯೋಗಿಸಿ, ಪ್ರಸಾದವೆಂದು ಭಕ್ಷಿಸಿ, ಹಸಿವನ್ನು ನೀಗಿಸಿಕೊಂಡರು. ಸಂಜೆ ಕರುವೊಂದೇ ಹಿಂತಿರುಗಿದುದನ್ನು ಗಮನಿಸಿದ ಗುರುಗಳಿಗೆ ''ಗೋವನ್ನು ಘೋರವಾದ ಹುಲಿಯೊಂದು ಭಕ್ಷಿಸಿತೆಂದು'' ಧೈರ್ಯದಿಂದ ಹೇಳಿದರು.

ಗುರುಗಳು ಅತ್ತ ವಿಶೇಷವಾಗಿ ಗಮನಿಸಲಿಲ್ಲ. ಆದರೇನು? ಮಾಡಿದ ತಪ್ಪಿಗೆ ಶಿಕ್ಷೆ ಹೇಗೆ ತಪ್ಪುತ್ತದೆ? ತಪ್ಪು ಒಂದಲ್ಲ, ಗೋವಧೆ, ಮಾಂಸ ಭಕ್ಷಣೆ, ಹಾಗೂ ಗುರುಗಳಲ್ಲಿ ಸುಳ್ಳು ಹೇಳಿದುದು. ಈ ಅಪರಾಧಗಳ ಪರಿಣಾಮವಾಗಿ, ಇರುವವರೆಗೂ ಕಷ್ಟಕಾರ್ಪಣ್ಯಗಳನ್ನು ಅನುಭವಿಸಿ, ಪ್ರಾಣಬಿಟ್ಟು, ದಶಾರ್ಣ ದೇಶದ ಕಾಡಿನಲ್ಲಿ ಕಾಡುಬೇಡರಾಗಿ ಹುಟ್ಟಿದರು. ತಾವು ಮಾಡಿದ ಶ್ರಾದ್ಧದ

ಮಹಿಮೆಯಿಂದ ಒಂದೇ ಕಡೆ ಹುಟ್ಟಿದ್ದಾರೆ. ಹಿಂಸಾಮಯ ಜೀವನ. ಕಡು ದಾರಿದ್ರ್ಯ. ಪ್ರಾಣಿ ಹಿಂಸೆ, ಮಾಂಸ ವಿಕ್ರಯ, ಇವುಗಳಿಂದ ಜೀವನ ಮಾಡುತ್ತಾ ಕಾಲಯಾಪನ ಮಾಡುತ್ತಿರುವಾಗ, ಹಿಂದೆ ಮಾಡಿದ ಶ್ರಾದ್ಧಪ್ರಭಾವದಿಂದ ಜನ್ಮಾಂತರ ಸ್ಮರಣೆಯುಂಟಾಗಿ, ದುರಾಸೆಯನ್ನು ಬಿಟ್ಟು, ಜಾತಿಗೆ ತಕ್ಕಂತೆ ಮಾಡಬೇಕಾದ ಹಿಂಸಾಕಾರ್ಯಗಳಿಂದ ವಿಷಣ್ಣರಾಗಿ, ತಮ್ಮ ವೃದ್ಧಮಾತಾಪಿತೃಗಳನ್ನು ಬಹಳ ಭಕ್ತಿ ಶ್ರದ್ಧೆಯಿಂದ ಸೇವಿಸುತ್ತಾ, ಕಾಲಯಾಪನ ಮಾಡಿದರು. ಕೊನೆಗೆ ಅಸುನೀಗಿ, ಕಾಲಂಜರ ಗಿರಿಯಲ್ಲಿ ಆ ಏಳೂ ಜನರು ಜಿಂಕೆಗಳಾಗಿ ಹುಟ್ಟಿದರು.

ಜಿಂಕೆಗಳು ಬಹಳ ಸರಳ ಜೀವಿಗಳು, ಹಾಗೂ ಸಾಧುಪ್ರಾಣಿಗಳು, ಚಂಚಲ ಸ್ವಭಾವದವು. ಬೇರೊಬ್ಬರಿಗೆ ಹಿಂಸೆ ಮಾಡಿಯೇ ಕಂಡವಲ್ಲ. ಕ್ರೂರ ಮೃಗಗಳ ಮಧ್ಯದಲ್ಲಿ ಅವಕ್ಕೆ ತುತ್ತಾಗದೇ ಜೀವನ ಮಾಡುತ್ತಿರುವುದೇ ಪರಮಾಶ್ಚರ್ಯ ಸಂಗತಿ. ಈ ಜನ್ಮದಲ್ಲಿಯೂ ಅವು ಒಟ್ಟಾಗಿವೆ. ಜನ್ಮಾಂತರ ಸ್ಮರಣೆಯಿದೆ. ಆದ್ದರಿಂದ ಪರಮ ಸಾಧು ಜೀವಿಗಳಾದ ಅವು ತಮ್ಮ ಪೂರ್ವಕರ್ಮಕ್ಕೆ ಪಶ್ಚಾತ್ತಾಪ ಪಡುತ್ತಾ, ಪ್ರಾಣಬಿಟ್ಟು, ಶರದ್ವೀಪದಲ್ಲಿ ಕ್ರೌಂಚಪಕ್ಷಿಗಳಾಗಿ ಜನ್ಮ ಪಡೆದಿವೆ.

ಕ್ರೌಂಚದಂಪತಿಗಳ ರಸಿಕತೆ, ಶೃಂಗಾರ ಪ್ರಿಯತೆ, ಅಸಾಧಾರಣವಾದುದು. ಒಂದು ಕ್ಷಣವೂ ಒಂದನ್ನೊಂದು ಅಗಲದೆ ಸುಖಿಸುವ ಜಂತುಗಳು. ಆದರೆ ಅವಕ್ಕೂ ಜನ್ಮಾಂತರದ ಮರೆವು ಬಂದಿಲ್ಲ. ತಮ್ಮ ಹಿಂದಿನ ಕರ್ಮವನ್ನು ನಿಂದಿಸುತ್ತಾ, ವಿರಕ್ತಭಾವನೆಯಿಂದ ಶರದ್ವೀಪದಲ್ಲಿ ತಪಸ್ವಿಗಳಂತೆ ಕಾಲಯಾಪನೆ ಮಾಡಿ, ಸಾವನ್ನಪ್ಪಿ ಮಾನಸ ಸರೋವರದಲ್ಲಿ ಏಳೂ ಒಂದೇ ಸ್ಥಳದಲ್ಲಿ ಹಂಸಗಳಾಗಿ ಹುಟ್ಟಿವೆ.

ಹಂಸ ಶಬ್ದವೇ ಸತ್ಯ ಶುದ್ಧ ಪರಮಾತ್ಮ ವಾಚಿಯಾದುದು. ಆ ಜನ್ಮದಲ್ಲಿಯೂ ತಮ್ಮ ಹಿಂದಿನ ಜನ್ಮಗಳ ಪರದಾಟವನ್ನು ಮರೆತಿಲ್ಲ. ಅದರ ಪರಿಣಾಮವಾಗಿ ವಿರಕ್ತಿಯಿಂದ, ಉತ್ತಮ ಜ್ಞಾನವುಂಟಾಗಿದೆ. ಆ ಅತ್ಯಂತ ಶುದ್ಧವಾದ ಆ ಮಾನಸ ಸರೋವರದಲ್ಲಿ ಹೇಗೆ ವಿಲಾಸ ಜೀವನವನ್ನು ಸಾಗಿಸಬಹುದು. ಆದರೆ ವಿರಕ್ತಿಯಿಂದ ಸಕಲ ಹಾವ, ಭಾವ, ವಿಲಾಸಗಳನ್ನು ಸಂಪೂರ್ಣವಾಗಿ ತೊರೆದು, ತಪಸ್ವಿಗಳಂತೆ ಅವು ಧ್ಯಾನಮಗ್ನವಾಗಿರುತ್ತಿದ್ದವು ಅದನ್ನು ಗಮನಿಸಿದ ಮಹಾತಪಸ್ವಿಗಳೂ ಆಶ್ಚರ್ಯಪಡುತ್ತಿದ್ದರು.

ಹೀಗಿರಲು ಒಂದು ದಿನ ಕಾಂಪಿಲ್ಯದೇಶದ ರಾಜನಾದ ವಿಭ್ರಾಜನು ತನ್ನ ಅಂತಃಪುರದ ಸ್ತ್ರೀಯರ, ಹಾಗೂ ಪರಿವಾರದೊಡನೆ ವನವಿಹಾರಕ್ಕೆಂದು ಅದೇ ಮಾನಸ ಸರೋವರದ ಪರಿಸರಕ್ಕೆ ಬಂದನು. ಅಲ್ಲಿ ಆ ರಾಜನಿಗೆ ಅವನ ಪರಿವಾರದವರು ಮಾಡುತ್ತಿದ್ದ ವಿಧವಿಧವಾದ ಉಪಚಾರಗಳನ್ನೂ, ಅವನು ಅನುಭವಿಸುತ್ತಿದ್ದ ವಿಶೇಷಸುಖವನ್ನೂ, ಮಾನಸ ಸರಸ್ಸಿನಲ್ಲಿ ಧ್ಯಾನ ಮಾಡುತ್ತಿದ್ದ ಹಂಸಗಳು ಸೂಕ್ಷ್ಮವಾಗಿ ಗಮನಿಸಿದ್ದವು.

ಹಾಗೆಯೇ ರಾಜನು ತನ್ನ ಪರಿವಾರದಿಂದ ವಿಶೇಷ ಉಪಚಾರಗಳನ್ನು ಮಾಡಿಸಿಕೊಳ್ಳುತ್ತಿದ್ದರೂ ಸತ್ಸಂಗದಿಂದ ಪರಸ್ಪರ ವ್ಯಾಮೋಹಪಡದೆ ಏಕಾಂತದಲ್ಲಿ ಧ್ಯಾನ ಮಗ್ನವಾಗಿದ್ದ ಆ ಹಂಸಗಳನ್ನು ನೋಡಿ, ಚಕಿತನಾದನು.

ಆ ಹಂಸಗಳ ಪೈಕಿ ಒಂದರ ಮನಸ್ಸಿನಲ್ಲಿ ಅನ್ನಿಸಿತು, ''ನಾನೆಷ್ಟು ತಪಸ್ಸು ಮಾಡಿ, ಏನು ಫಲ? ಇಷ್ಟು ಬ್ರಹ್ಮಚರ್ಯದಿಂದಿದ್ದು ಏನನ್ನು ಪಡೆದೆನು, ಈ ರಾಜನಂತೆ ಒಂದು ಕ್ಷಣವೂ ಸುಖ ಪಡಲಿಲ್ಲವಲ್ಲಾ''? ಎಂದು ದುಃಖಿಸುತ್ತಾ ನಾನು ಮುಂದಿನ ಜನುಮದಲ್ಲಿ ರಾಜನಾಗಿಯಾದರೂ ಜನಿಸಬಾರದೆ? ಎಂದು ಉದ್ಗಾರ ಮಾಡಿತು. ಇದರ ಮಾತನ್ನು ಆಲಿಸಿ, ಮತ್ತೆರಡು ಹಂಸಗಳ ಮನಸ್ಸು ಅದರಂತೆ ವಿಚಲಿತವಾಗಿ, ನಾವು ಈ ರಾಜನಾಗಿ ಜನಿಸುವ ಈ ಹಂಸಕ್ಕೇ ಅಮಾತ್ಯರಾಗಿ ಜನಿಸಬಾರದೆ? ಎಂದು ಬಯಸಿದವು.

ಅದೇ ಸಮಯದಲ್ಲಿ ಪರಿವಾರದವರಿಂದ ಸಕಲ ಸೇವೆಗಳನ್ನು ಮಾಡಿಸಿಕೊಳ್ಳುತ್ತಿದ್ದ ವಿಭ್ರಾಜರಾಜನಿಗೂ ಮನಸ್ಸು ಪರಿವರ್ತಿತವಾಗಿದೆ, ಅದೇ ಕಾಲ ಕರ್ಮ ಸಂಯೋಗ'' ಎಂದರೆ, ಈ ಮೂಕಪ್ರಾಣಿಗಳಾದ ಹಂಸಗಳ ಜನ್ಮ ಎಷ್ಟೋ ಮಿಗಿಲಾದುದು. ನಾನು ಮಾನವನಾಗಿ, ರಾಜನಾಗಿ ಹುಟ್ಟಿ, ಏನು ಸಾಧಿಸಿದಂತಾಯಿತು? ಆಯುಷ್ಯವು ದಿನೇ ದಿನೇ ನಶಿಸುತ್ತಿದೆ. ಆ ಹಂಸಗಳಿಗಿರುವಂತೆ ತನಗೆ ವಿರಕ್ತಿ ಬರಬಾರದೇ'' ನಾನು ಅನುಭವಿಸುತ್ತಿರುವುದು, ಎಂತಹ ಸುಖ? ನನ್ನ ಜನ್ಮಕ್ಕೆ ಧಿಕ್ಕಾರ'' ಎನ್ನಿಸಿತು.

ಆ ಮೂರು ಹಂಸಗಳ ಅನಿಸಿಕೆಯನ್ನು ಗಮನಿಸಿದ ಇತರ ನಾಲ್ಕು ಹಂಸಗಳಿಗೆ ಈ ಮೂರು ಹಂಸಗಳ ಬಗ್ಗೆ ಬಹಳ ಬೇಸರವಾಯಿತು ಮಹತ್ತರವಾದ ಕೋಪವೇ ಉದಿಸಿತು. ಕೋಪವನ್ನು ತಡೆಯಲಾರದೇ ಹಂಸಗಳನ್ನು ಕುರಿತು ''ನಿಮ್ಮ ಸಹವಾಸ ನಮಗೆ ಸಾಕು, ನೀವು ಸನ್ಮಾರ್ಗದಿಂದ

ಚ್ಯುತರಾದಿರಿ, ನಿಮ್ಮ ಮಾರ್ಗ ನಿಮಗೆ. ನಮ್ಮ ದಾರಿ ನಮಗೆ." ಎಂದು ಗದರಿಸಿ, ಅಲ್ಲಿಂದ ಹೊರಟೇ ಬಿಟ್ಟವು.

ಕೂಡಲೇ ಎಚ್ಚೆತ್ತ ಅವು "ಮಿತ್ರರಿರಾ, ನಮ್ಮನ್ನು ತೊರೆಯಬೇಡಿ, ನಮ್ಮ ತಪ್ಪು ಅರ್ಥವಾಯಿತು. ನಮಗೆ ಉದ್ಧಾರದ ಮಾರ್ಗವನ್ನು ಬೋಧಿಸಿರಿ. ನಮ್ಮನ್ನು ಬಿಟ್ಟು ಮುಂದುವರಿಯಬೇಡಿ, ಈ ನಮ್ಮ ಅಪರಾಧಕ್ಕೆ ಪರಿಹಾರವನ್ನು ಬೋಧಿಸಿ" ಎಂದು ಬೇಡಿದವು.

ಆಗ ಆ ನಾಲ್ಕು ಹಂಸಗಳು "ಎಲೈ ಹಂಸಗಳಿರಾ, ನೀವು ಮೂವರೂ ರಾಜ ಹಾಗೂ ಅಮಾತ್ಯರಾಗಿ ಜನ್ಮತಾಳಿ, ಈ ಹಿಂದಿನ ಎಲ್ಲವನ್ನೂ ಮರೆತು, ನಿಮ್ಮ ಅಪೇಕ್ಷೆಯಂತೆ ಕ್ಷುಲ್ಲಕವಾದ ರಾಜಭೋಗಗಳನ್ನು ಅನುಭವಿಸದೇ ತೀರದು. ಆದರೆ ಈ ನಾವು ಬೋಧಿಸುವ ಮಂತ್ರವನ್ನು ನೀವು ಒಂದು ದಿನ ಶ್ರವಣ ಮಾಡುವಿರಿ, ಕೂಡಲೇ ಜನ್ಮಾಂತರ ಸ್ಮರಣೆ ಬಂದು, ಆ ನಿಮ್ಮ ಶರೀರವನ್ನು ತ್ಯಾಗ ಮಾಡಿ, ಪುನರ್ಜನ್ಮ ಪಡೆದು, ನಮ್ಮೊಡನೆ ಸೇರುವಿರಿ. ಈ ಮಂತ್ರವು ರಾಜಭೋಗದಲ್ಲಿರುವ ನಿಮಗೆ ಮರೆತು ಹೋಗುತ್ತದೆ. ಒಂದು ದಿನ ಅದು ಸ್ಮರಣೆಗೆ ಬರುತ್ತದೆ" ಎಂದು ಹೇಳಿ ಹೀಗೆ ಹೇಳಿದವು.

-ಮಂತ್ರ-

ಸಪ್ತ ವ್ಯಾಧಾ ದಶಾರ್ಣೇಷು ಮೃಗಾಃ ಕಾಲಂಜರೇ ಗಿರೌ॥

ಚಕ್ರವಾಕಾಃಶರದ್ವೀಪೇ ಹಂಸಾಃ ಸರಸಿ ಮಾನಸೇ॥

ಯೇಸ್ಮಜಾತಾಃಕುರುಕ್ಷೇತ್ರೇ ಬ್ರಾಹ್ಮಣಾ ವೇದಪಾರಗಾಃ।

ಪ್ರಸ್ಥಿತಾದೀರ್ಘಮಧ್ವಾನಂ ಯೂಯಂ ಕಿಮವಸೀದಥ॥

ಕೆಲವೇ ದಿನಗಳಲ್ಲಿ ಒಂದು ಹಂಸವು ವಿಭ್ರಾಜನ ಕುಮಾರನಾಗಿ ಜನಿಸಿ, ದಿನೇ ದಿನೇ ಬೆಳೆಯ ತೊಡಗಿದನು. ಅವನೇ ಬ್ರಹ್ಮದತ್ತ, ಉಳಿದೆರಡು ಹಂಸಗಳು ತಮ್ಮ ಆಸೆಯಂತೆ ಮಂತ್ರಿಕುವರರಾಗಿ ಅದೇ ರಾಜಧಾನಿಯಲ್ಲಿ ಜನಿಸಿ ಬೆಳೆದರು. ವಿಭ್ರಾಜನು ತನ್ನ ಆಸೆಯಂತೆ ತನ್ನ ಸಕಲ ಐಶ್ವರ್ಯವನ್ನೂ ಸಕಲ ಪರಿವಾರವನ್ನೂ ಸಂಪೂರ್ಣವಾಗಿತೊರೆದು, ಪರಿಮವಿರಕ್ತನಾಗಿ ರಾಜ್ಯವನ್ನು ಕುಮಾರನಾದ ಬ್ರಹ್ಮದತ್ತನಿಗೆ ವಹಿಸಿಕೊಟ್ಟು, ತಪಸ್ಸಿಗಾಗಿ ವನಕ್ಕೆ ತೆರಳಿದನು. ತನ್ನ ಇಷ್ಟದಂತೆ ಸಾಧನೆ ಮಾಡಿ ಕೃತಾರ್ಥನಾದನು.

ಉಳಿದ ನಾಲ್ಕು ಹಂಸಗಳು, ಅದೇ ಕಾಂಪಿಲ್ಯಾನಗರದಲ್ಲಿ ವೇದಾಧ್ಯಯನ ಸಂಪನ್ನನಾದ ಒಬ್ಬ ಬಡ ಬ್ರಾಹ್ಮಣನ ಕುಮಾರರಾಗಿ ಜನ್ಮ ತಾಳಿ, ಪೂರ್ವಜನ್ಮದ ಸ್ಮರಣೆಯು ದೃಢವಾಗಿದ್ದುದರಿಂದ ತಮ್ಮ ಸಾಧನೆಯನ್ನು ಮುಂದುವರಿಸುತ್ತಾ, ಪರಮ ವಿರಕ್ತರಾಗಿ, ಯೋಗಮಾರ್ಗದಲ್ಲಿ ಬಹಳವಾಗಿ ಮುಂದುವರಿದರು. ಒಬ್ಬರೂ ಗೃಹಸ್ಥಾಶ್ರಮವನ್ನು ಸ್ವೀಕರಿಸಲೇ ಇಲ್ಲ. ತಂದೆ ತಾಯಿಗಳ ಆಶೆ ಈಡೇರಲಿಲ್ಲ. ಒಂದು ದಿನ ನಾಲ್ವರೂ 'ತಪಸ್ಸಿಗಾಗಿ ಕಾಡಿಗೆ ಹೋಗಲು ಅನುಮತಿ ಕೊಡಿ; ಎಂದು ಮಾತಾಪಿತೃಗಳನ್ನು ಬೇಡಿದಾಗ, ಅವರು "ನೀವು ಏನು ಓದಿ ಏನು ಪ್ರಯೋಜನ? ವೃದ್ಧ ಮಾತೃಪಿತೃಗಳನ್ನು ತೊರೆದು, ಎಲ್ಲಿ ಹೋಗುವಿರಿ? ಕಡುಬಡವರು ವೃದ್ಧರೂ ಆದ ನಮಗೆ ಗತಿಯಾರು? ಇದು ಯಾವ ಧರ್ಮ? ಉತ್ತಮ ಗೃಹಸ್ಥರಾಗಿ ಜೀವನವನ್ನು ಮಾಡಿ,ಕಡೆಯಲ್ಲಿ ಉಳಿದ ವಾನಪ್ರಸ್ಥ ಹಾಗೂ ಸನ್ಯಾಸಾಶ್ರಮವನ್ನು ಸ್ವೀಕರಿಸುವುದು ಯುಕ್ತವಾದುದು, ಈಗ ನ್ಯಾಯವಲ್ಲ. ಎಂದು ವಿವೇಕ ಹೇಳಿದರು.

ಆಗ ಆ ನಾಲ್ವರು ಪುತ್ರರು "ಪೂಜ್ಯರೇ ನಮಗೆ ಪ್ರವೃತ್ತಿ ಮಾರ್ಗದಲ್ಲಿ ಸುತರಾಂ ಇಚ್ಛೆಯಿಲ್ಲ" ಸಪ್ತ ವ್ಯಾಧಾ...ಕಿಮವಸೀದಥ॥ ಎಂಬ ಈ ಮಂತ್ರವನ್ನು ನೀವು ನಿತ್ಯವೂ ಹೇಳಿಕೊಳ್ಳುತ್ತಿದ್ದು ಒಂದು ದಿನ ಈ ದೇಶದ ರಾಜ ಹಾಗೂ ಅಮಾತ್ಯರೂ ಈ ಮೂವರೂ ಒಟ್ಟಾಗಿರುವ ಸಂದರ್ಭವನ್ನು ಗಮನಿಸಿ, ಅವರಿಗೆ ಕಿವಿಮುಟ್ಟುವಂತೆ ಉಚ್ಚಸ್ವರದಿಂದ ಹೇಳಿರಿ. ನಿಮಗೆ ಸಕಲವ್ಯವಸ್ಥೆಗಳನ್ನೂ ಮಾಡಿ, ಅವರೂ ಕೃತಾರ್ಥರಾಗುತ್ತಾರೆಂದು ಹೇಳಿ, ಅವರ ಅನುಮತಿಯನ್ನು ಪಡೆದು, ಹೊರಟೇಬಿಟ್ಟರು.

ಈ ವೃದ್ಧ ದಂಪತಿಗಳು ರಾಜಾಮಾತ್ಯರ ಭೇಟಿಯನ್ನೇ ಕಾಯುತ್ತಿದ್ದರು.

ಅತ್ತ ಬ್ರಹ್ಮದತ್ತನು ತನ್ನ ರಾಣಿಯಾದ ಸನ್ಮತಿಯಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ, ಒಂದು ದಿನ ಅವಳ ವ್ಯವಹಾರದಿಂದ ವಿರಕ್ತಿಯ ಪರಾಕಾಷ್ಠೆಯನ್ನೇ ಹೊಂದಿ, ದೇವರ ಧ್ಯಾನಕ್ಕಾಗಿ ವನಕ್ಕೆ ತೆರಳಿ, ಭಗವಂತನ ಕೃಪೆಗೆ ಪಾತ್ರನಾಗಿ, ಸಪರಿವಾರನಾಗಿ ಹಿಂತಿರುಗುತ್ತಿದ್ದಾನೆ. ಇಂತಹ ಸಂದರ್ಭವನ್ನು ನಿರೀಕ್ಷಿಸುತ್ತಿದ್ದ ಆ ವೃದ್ಧ ದಂಪತಿಗಳು ಜನರ ಗುಂಪಿನಲ್ಲಿ ನುಗ್ಗಿ, ಮುಂದೆ ಬಂದು, ರಾಜಾಮಾತ್ಯರ ಕಿವಿ ಮುಟ್ಟುವಂತೆ, ಸಪ್ತವ್ಯಾಧಾ...ಅವಸೀದಥ॥ ಎಂಬ ಮಂತ್ರವನ್ನು ಗಟ್ಟಿಯಾಗಿ ಹೇಳಿದರು.

ಅದನ್ನು ಕೇಳುತ್ತಲೇ ಮೂವರೂ ಬಿದ್ದು ಮೂರ್ಛಿತರಾದರು. ಈ ವೃದ್ಧದಂಪತಿಗಳ ಗೋಳೂ ಹೇಳತೀರದು. ತಮ್ಮ ಮಕ್ಕಳು ಇದೇನು ಹೀಗೆ ಮಾಡಿದರು.? ಎಂದು ಅವರನ್ನು ನಿಂದಿಸತೊಡಗಿದರು.

ಅತ್ತ ರಾಜನ ಪರಿವಾರ ಹಾಗೂ ಪ್ರಜೆಗಳು ದುಃಖಸಾಗರದಲ್ಲಿ ಮುಳುಗಿದರು. ಪರಿವಾರದವರಶೈತ್ಯೋಪಚಾರಗಳಿಂದ ಎಚ್ಚೆತ್ತ ರಾಜನಿಗೂ, ಅಮಾತ್ಯರಿಗೂ, ತಮ್ಮ ಹಿಂದಿನ ಎಲ್ಲ ವೃತ್ತಾಂತಗಳೂ ಸ್ಮೃತಿಪಥಕ್ಕೆ ಬಂದವು. ಕೂಡಲೇ ಆ ಮಂತ್ರವನ್ನು ಪಠಿಸಿದ್ದ ವೃದ್ಧರನ್ನು ಕರೆಸಿ, ಅವರಿಗೆ ಸನ್ಮಾನ ಮಾಡಿ, ಸಕಲ ಸೌಕರ್ಯಗಳನ್ನೂ ಏರ್ಪಡಿಸಿ, ರಾಜ್ಯವನ್ನು ಕುಮಾರನಾದ ಅಣುಹನಿಗೆ ಒಪ್ಪಿಸಿ, ಅವನನ್ನು ಹರಸಿ, ತಮ್ಮ ಜೊತೆಯ ನಾಲ್ವರನ್ನೂ, ಅರಸಿಕೊಂಡು ಹೋಗಿ, ಅವರನ್ನು ಸಂಧಿಸಿ, ತಮ್ಮ ಉದ್ಧಾರದ ಯೋಗ ಮಾರ್ಗವನ್ನವಲಂಬಿಸಿ ಕೃತಾರ್ಥರಾದರು.

ಈ ಕಥೆಯು ಶ್ರಾದ್ಧದ ಮಹಿಮೆಯನ್ನು ಈ ರೀತಿಕೊಂಡಾಡುತ್ತದೆ. ಆದುದರಿಂದ ಶ್ರಾದ್ಧವು ಯಜ್ಞ. ಇದು ಪಿತೃಯಜ್ಞ, ಸಕಲ ಇಷ್ಟಾರ್ಥಗಳನ್ನು ಇದರಿಂದ ಪಡೆಯಬಹುದು. ನಮ್ಮನ್ನಗಲಿದ ಹಿರಿಯರನ್ನು ಸ್ಮರಿಸಿ ಪರೋಕ್ಷವಾಗಿ ಸೇವೆ ಸಲ್ಲಿಸುವ ಪುಣ್ಯದಿನ. ಎಷ್ಟೇ ಉತ್ತಮ ತೀರ್ಥಕ್ಷೇತ್ರ ಯಾತ್ರೆಗಳನ್ನು ಆಚರಿಸಿದ್ದರೂ ಶ್ರಾದ್ಧವನ್ನು ಸರ್ವಥಾ ಬಿಡಲೇಬಾರದು. ಇದು ನಮ್ಮ ಮುಂದಿನವರಿಗೆ ಆದರ್ಶವಾದುದು.

ಈ ಎಲ್ಲ ವಿವರಣೆಯನ್ನೂ ಇಂದಿನ ಯುವಜನರ ಉಪಯೋಗಕ್ಕಾಗಿ ತಿಳಿಸಲಾಗಿದೆ. ಇವನ್ನು ಗಮನಿಸಿ, ಸುಸಂಸ್ಕೃತರಾಗಿ, ಪಿತೃಋಣದಿಂದ ಮುಕ್ತರಾಗಲು ಈ ಗ್ರಂಥವು ಮಾರ್ಗದೀವಿಗೆ ಯಾದರೆ, ನಮ್ಮ ಶ್ರಮ ಸಾರ್ಥಕವಾಗುತ್ತದೆ. ಗುಣಗ್ರಹಣಮಾಡಿ, ಇನ್ನೂ ಅಗತ್ಯ ವಿಷಯಗಳನ್ನು ಸೂಚಿಸಿದರೆ, ಮುಂದಿನ ಮುದ್ರಣದಲ್ಲಿ ಸೇರಿಸಲಾಗುವುದು.

''ಸರ್ವೇ ನಿರಾಮಯಾಸ್ಸಂತು ಮಾ ಕಶ್ಚಿದ್ದುಃ ಖಭಾಗಿನಃ''

ಎಂದು ಉಪಸಂಹರಿಸೋಣ.

ವಿದ್ವಾನ್ ಎಸ್.ವಿ. ಶ್ಯಾಮಭಟ್ಟ
ತಾ:
"ಪ್ರದೋಷ ಸಂಘ"
103, ಒಂದನೇ ಬ್ಲಾಕ್, 17ನೇ ಅಡ್ಡರಸ್ತೆ
ರಾಜಾಜಿನಗರ, ಬೆಂಗಳೂರು-560 010.

ಶ್ರೀ:

## ಶ್ರೀ ಗುರುಭ್ಯೋ ನಮಃ

# ಆಶ್ವಲಾಯನ ಶ್ರಾದ್ಧ ಪ್ರಯೋಗಃ

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ।

ಗುರುಸ್ಸಾಕ್ಷಾತ್ ಪರಂ ಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ।

## ಪವಿತ್ರಧಾರಣೆ

(ದ್ವಿರಾಚಮ್ಯ)

ಓಂ॥ ಪವಿತ್ರವಂತಃ ಪರಿವಾಚಮಾಸತೇ ಪಿತೈಷಾಂ ಪ್ರತ್ನೋ ಅಭಿರಕ್ಷತಿ ವ್ರತಮ್।
ಮಹಸ್ಸಮುದ್ರಂ ವರುಣಸ್ತಿರೋದಧೇ ಧೀರಾ ಇಚ್ಛೇಕು ರ್ಧರುಣೇಷ್ವಾರಭಮ್॥

ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ। ಅತಪ್ತತನೂರ್ನತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ಸಮಾಶತ॥

(ಆಭ್ಯಾಂ ಪವಿತ್ರಂ ಧೃತ್ವಾ, ಪ್ರಾಣಾನಾಯಮ್ಯ)

–ಸಂಕಲ್ಪ:–

ಏವಂ ಗುಣೇತ್ಯಾದಿ ಪುಣ್ಯ ತಿಥೌ ಪ್ರಾಚೀನಾವೀತೀ, ಯಜಮಾನಸ್ಯ (ಅಸ್ಮತ್) ಪಿತುಃ (ಮಾತುಃ) ಪ್ರತಿಸಾಂವತ್ಸರಿಕ ಮೃತಾಹಾನ್ನಶ್ರಾದ್ಧೇ ಆದೌ ಆತ್ಮ ಸ್ಥಳ ಭಾಂಡ ಭಾಜನ ಕರ್ತೃ ಭೋಕ್ತೃ ಹವಿರ್ದ್ರವ್ಯ ಶುದ್ಧ್ಯರ್ಥಂ, ಪ್ರಾಯಶ್ಚಿತ್ತ ಸೂಕ್ತಮಂತ್ರ ಪಠನಂ ಕರಿಷ್ಯೇ। (ತಿಲೋದಕಂ ದದ್ಯಾತ್)

ಸವ್ಯ॥ ಯವೋದಕಮಹಂಕರಿಷ್ಯೇ। (ಯವೋದಕಂ ದದ್ಯಾತ್)

ಪ್ರಾ॥ ತಿಲೋದಕಮಹಂ ಕರಿಷ್ಯೇ। (ತಿಲೋದಕಂ ದದ್ಯಾತ್)

ಸವ್ಯ॥ ಸ್ಯೋನಾಪೃಥಿವಿ ಭವಾನೃಕ್ಷರಾ ನಿವೇಶನೀ।
ಯಚ್ಛಾನಃ ಶರ್ಮ ಸಪ್ರಥಃ॥

(ಇತಿಭೂಮಿಂಪ್ರಾರ್ಥ್ಯ)

ಯೇನ ತೋಕಾಯ ತನಯಾಯ ಧಾನ್ಯಂ (ಅಂ) ಬೀಜಂ
ವಹಧ್ವೇ ಅಕ್ಷಿತಮ್। ಅಸ್ಮಭ್ಯಂ ತದ್ಧತ್ತನ ಯದ್ವ
ಈ ಮಹೇ ರಾಧೋ ವಿಶ್ವಾಯು ಸೌಭಗಮ್॥

(ಮಂಡಲಂ ಕೃತ್ವಾ ತದುಪರಿ ಯವತಿಲ ದರ್ಭಾನ್ ನಿಕ್ಷಿಪ್ಯ)

ಆಕಲಶೇಷು ಧಾವತಿ ಶ್ಯೇನೋ ವರ್ಮ ವಿಗಾಹತೇ।
ಅಭಿದ್ರೋಣಾ ಕನಿಕ್ರದತ್ (ಕಲಶಂ ನಿಧಾಯ)

ಇಮಂ ಮೇ ಗಂಗೇ ಯಮುನೇ ಸರಸ್ವತಿ
ಶುತುದ್ರಿಸ್ತೋಮಂ ಸಚತಾಪರುಷ್ಣಾ।
ಅಸ್ಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ
ಶೃಣುಹ್ಯಾ ಸುಷೋಮಯಾ॥ (ಇತಿಪವಿತ್ರತೀರ್ಥಾನ್ಯಾವಾಹ್ಯ)

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್।
ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಮ್॥ (ಇತಿ ಗಂಧೇನಾಭ್ಯರ್ಚ್ಯ)

(ದರ್ಭತಳಸೀಪತ್ರೈರಭ್ಯರ್ಚ್ಯ)

ಯವೋಽಸಿ ಧಾನ್ಯರಾಜೋ ವಾ ವಾರುಣೋ ಮಧು ಸಂಯುತಃ॥
ನಿರ್ಣೋದಃ ಸರ್ವಪಾಪಾನಾಂ ಪವಿತ್ರಮೃಷಿಭಿಃ ಸ್ಮೃತಮ್॥

(ಇತಿಯವಾನ್ನಿಕ್ಷಿಪ್ಯ)

ಪ್ರಾ॥ ತಿಲೋಽಸಿ ಸೋಮದೈವತ್ಯೋ ಗೋಸವೇ ದೇವನಿರ್ಮಿತಃ।

ಪ್ರತ್ನವದ್ಭಿಃ ಪ್ರತ್ತಃ ಸ್ವಧ ಏಹಿ॥ (ಇತಿ ತಿಲಾನ್ ವಿಕೀರ್ಯ)

ಸವ್ಯ॥ ಶರಾಸಃ ಕುಶರಾಸೋ ದರ್ಭಾಸಃ ಸೈರ್ಯಾ ಉತ।

ಮೌಂಜಾ ಅದೃಷ್ಟಾ ಬೈರಿಣಾಸ್ಸರ್ವೇ ಸಾಕಂ ನ್ಯಲಿಪ್ಸತ॥ (ಇತಿ ಕೂರ್ಚಂ ನಿಧಾಯ)

ಸಹಿ ರತ್ನಾನಿ ದಾಶುಷೇ ಸುವಾತಿ ಸವಿತಾ ಭಗಃ।

ತಂ ಭಾಗಂ ಚಿತ್ರಮೀಮಹೇ॥ (ಇತಿ ಹಿರಣ್ಯಂನಿಕ್ಷಿಪ್ಯ)

## – ಪ್ರಾಯಶ್ಚಿತ್ತ ಮಂತ್ರಾಃ –

ಓಂ ಸಹಸ್ರ ಶೀರ್ಷಾ ಪುರುಷ ಸ್ಸಹಸ್ರಾಕ್ಷ ಸ್ಸಹಸ್ರಪಾತ್।
ಸಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಮ್॥
ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್।
ಉತಾಮೃತತ್ವಸ್ಯೇಶಾನೋ ಯದನ್ನೇನಾ ತಿರೋಹತಿ॥
ಏತಾವಾನಸ್ಯ ಮಹಿಮಾ ತೋ ಜ್ಯಾಯಾಂ ಶ್ಚ ಪೂರುಷಃ।
ಪಾದೋಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ॥
ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಸ್ಯೇಹಾ ಭವತ್ಪುನಃ।
ತತೋ ವಿಷ್ವ ವ್ಯಕ್ರಾಮತ್ಸಾಶನಾನ ಶನೇ ಅಭಿ॥
ತಸ್ಮಾದ್ವಿರಾಳಜಾಯತ ವಿರಾಜೋ ಅಧಿ ಪೂರುಷಃ।
ಸಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿ ಮಥೋಪುರಃ ॥೧॥
ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ।
ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮ ಶ್ಶರದ್ಧವಿಃ॥
ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ಪುರುಷಂ ಜಾತಮಗ್ರತಃ।
ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚಯೇ॥

ತಸ್ಮಾದ್ಯಜ್ಞಾತ್ಸರ್ವ ಹುತಸ್ಸಂಭೃತಂ ಪೃಷದಾಜ್ಯಮ್।
ಪಶೂಂಸ್ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚಯೇ॥
ತಸ್ಮಾದ್ಯಜ್ಞಾತ್ಸರ್ವ ಹುತ ಋಚಸ್ಸಾಮಾನಿ ಜಜ್ಞಿರೇ।
ಛಂದಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ॥
ತಸ್ಮಾದಶ್ವಾ ಅಜಾಯಂತ ಯೇಕೇಚೋಭಯಾದತಃ।
ಗಾವೋ ಹ ಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ॥೨॥
ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್।
ಮುಖಂ ಕಿಮಸ್ಯಕೌಬಾಹೂ ಕಾ ಊರೂಪಾದಾ ಉಚ್ಯೇತೇ॥
ಬ್ರಾಹ್ಮಣೋಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ।
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ॥
ಚಂದ್ರಮಾ ಮನಸೋ ಜಾತಶ್ಚಕ್ಷೋಸ್ಸೂರ್ಯೋ ಅಜಾಯತ।
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ॥
ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋದ್ಯೌಸ್ಸಮವರ್ತತ।
ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾಂ ಅಕಲ್ಪಯನ್।
ಸಪ್ತಾಸ್ಯಾಸನ್ಪರಿಧಯ ಸ್ತ್ರಿಸ್ಸಪ್ತ ಸಮಿಧಃ ಕೃತಾಃ। ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ಪುರುಷಂ ಪಶುಮ್॥
ಯಜ್ಞೇನ ಯಜ್ಞಮಯಜಂತ ದೇವಾ ಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್॥
ತೇಹ ನಾಕಂ ಮಹಿಮಾನಸ್ಸಚಂತ ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ॥೩॥
ಅತೋ ದೇವಾ ಅವಂತುನೋ ಯತೋ ವಿಷ್ಣುರ್ವಿಚ ಕ್ರಮೇ। ಪೃಥಿವ್ಯಾಸ್ಸಪ್ತ ಧಾಮಭಿಃ॥

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಮ್।

ಸಮೂಢಮಸ್ಯ ಪಾಂಸುರೇ॥

ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ।

ಅತೋ ಧರ್ಮಾಣಿ ಧಾರಯನ್॥

ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ।

ಇಂದ್ರಸ್ಯ ಯುಜ್ಯಸ್ಸಖಾ॥

ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ।

ದಿವೀವ ಚಕ್ಷುರಾತತಮ್॥

ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಸ್ಸಮಿಂಧತೇ।

ವಿಷ್ಣೋರ್ಯತ್ ಪರಮಂ ಪದಮ್॥

ಮಮಾಗ್ನೇ ವರ್ಚೋ ವಿಹವೇಷ್ವಸ್ತು ವಯಂ ತ್ವೇಂಧಾನಾ ಸ್ತನ್ವಂ ಪುಷೇಮ। ಮಹ್ಯಂ ನಮಂತಾಂ ಪ್ರದಿಶ ಶ್ಚತಸ್ರ ಸ್ತ್ವಯಾ ಧ್ಯಕ್ಷೇಣ ಪೃತನಾ ಜಯೇಮ॥

ಮಮ ದೇವಾ ವಿಹವೇ ಸಂತು ಸರ್ವ ಇಂದ್ರವಂತೋ ಮರುತೋ ವಿಷ್ಣುರಗ್ನಿಃ। ಮಮಾಂತರಿಕ್ಷ ಮುರು ಲೋಕ ಮಸ್ತು ಮಹ್ಯಂ ವಾತಃ ಪವತಾಂ ಕಾಮೇ ಅಸ್ಮಿನ್॥ ಮಯಿ ದೇವಾ ದ್ರವಿಣ ಮಾಯಜಂತಾಂ ಮಯ್ಯಾ ಶೀರಸ್ತು ಮಯಿ ದೇವಹೂತಿಃ। ದೈವ್ಯಾ ಹೋತಾರೋ ವನುಷಂತ ಪೂರ್ವೇರಿಷ್ಟಾಸ್ಸ್ಯಾಮ ತನ್ವಾ ಸುವೀರಾಃ॥

ಮಹ್ಯಂ ಯಜಂತು ಮಮ ಯಾನಿ ಹವ್ಯಾಕೂತಿ ಸ್ಸತ್ಯಾ

ಮನಸೋ ಮೇ ಅಸ್ತು। ಏನೋ ಮಾನಿಗಾಂ ಕತಮಚ್ಚನಾಹಂ ವಿಶ್ವೇದೇವಾಸೋ ಅಧಿವೋಚತಾನಃ॥

ದೇವೀಷ್ಷಳುರ್ವೀರುರುನಃ ಕೃಣೋತ ವಿಶ್ವೇದೇವಾಸ ಇಹವೀರಯಧ್ವಮ್। ಮಾ ಹಾಸ್ಮಹಿ ಪ್ರಜಯಾ ಮಾತನೂಭಿ ರ್ಮಾರಧಾಮ ದ್ವಿಷತೇ ಸೋಮ ರಾಜನ್॥

ಅಗ್ನೇ ಮನ್ಯುಂ ಪ್ರತಿನುದನ್ ಪರೇಷಾ ಮದಬ್ಧೋ
ಗೋಪಾಃ ಪರಿಪಾಹಿ ನಸ್ತ್ವಮ್। ಪ್ರತ್ಯಂಚೋ ಯಂತು
ನಿಗುತಃ ಪುನಸ್ತೇಽಮೈಷಾಂ ಚಿತ್ತಂ ಪ್ರಬುಧಾಂ
ವಿನೇಶತ್॥ ಧಾತಾ ಧಾತೃಣಾಂ ಭುವನಸ್ಯ ಯಸ್ಪತಿ ರ್ದೇವಂ ತ್ರಾತಾರ
ಮಭಿಮಾತಿಷಾಹಮ್। ಇಮಂ ಯಜ್ಞಮಶ್ವಿ
ನೋಭಾ ಬೃಹಸ್ಪತಿ ರ್ದೇವಾಃ ಪಾಂತು ಯಜಮಾನಂ ನ್ಯರ್ಥಾತ್॥ ಉರು
ವ್ಯಚಾನೊ ಮಹಿಷಶ್ಶರ್ಮ ಯಂ ಸದಸ್ಮಿನ್
ಹವೇ ಪುರುಹೂತಃ ಪುರುಕ್ಷುಃ। ಸನಃ ಪ್ರಜಾಯೈ
ಹರ್ಯಶ್ವ ಮೃಳಯೇಂದ್ರ ಮಾನೋ ರೀರಿಷೋ ಮಾ ಪರಾದಾಃ॥
ಯೇನಃ ಸಪತ್ನಾ ಅಪತೇ ಭವಂತ್ವಿಂದ್ರಾಗ್ನಿಭ್ಯಾಮವ ಭಾಧಾಮಹೇತಾನ್।
ವಸವೋ ರುದ್ರಾ ಆದಿತ್ಯಾ
ಉಪರಿ ಸ್ಪೃಶಂ ಮೋಗ್ರಂ ಚೇತ್ತಾರಮಧಿ ರಾಜಮಕ್ರನ್॥
ಅರ್ವಾಂಚಮಿಂದ್ರಮಮುತೋ ಹವಾಮಹೇ ಯೋ
ಗೋಜಿದ್ಧನ ಜಿದಶ್ವಜಿದ್ಯಃ। ಇಮಂ ನೋ ಯಜ್ಞಂ
ವಿಹವೇ ಜುಷಸ್ವಾಸ್ಯ ಕುರ್ಮೋ ಹರಿವೋ ಮೇದಿನಂ ತ್ವಾ॥
ತರತ್ಸ ಮಂದೀ ಧಾವತಿ ಧಾರಾ ಸುತಸ್ಯಾಂಧಸಃ।
ತರತ್ಸ ಮಂದೀ ಧಾವತಿ॥ ಉಸ್ರಾವೇದ ವಸೂನಾಂ
ಮರ್ತಸ್ಯ ದೇವ್ಯವಸಃ। ತರತ್ಸಮಂದೀ ಧಾವತಿ।
ಧ್ವಸ್ರಯೋಃ ಪುರುಷಂತ್ಯೋ ರಾಸಹಸ್ರಾಣಿ ದದ್ಮಹೇ।
ತರತ್ಸಮಂದೀ ಧಾವತಿ॥ ಆಯಯೋ ಸ್ತ್ರಿಂಶ ತಂತಸಾ
ಸಹಸ್ರಾಣಿ ಚ ದದ್ಮಹೇ। ತರತ್ಸಮಂದೀ ಧಾವತಿ॥
ಹಂಸಃ ಶುಚಿಷದ್ವಸು ರಂತರಿಕ್ಷಸದ್ಧೋತಾವೇದಿಷ ದತಿಥಿರ್ದುರೋಣಸತ್।

ನೃಷದ್ವರ ಸದೃತ ಸದ್ವ್ಯೋಮ ಸದಬ್ಜಾ ಗ್ರೋಜಾ ಋತಜಾ ಅದ್ರಿಜಾ ಋತಮ್॥

ಯತ್ಕಿಂಚೇದಂ ವರುಣ ದೈವ್ಯೇ ಜನೇಭಿ ದ್ರೋಹಮಮನುಷ್ಯಾಶ್ಚರಾಮಸಿ।
ಅಚಿತ್ತೀ ಯತ್ತವ ಧರ್ಮಾ ಯುಯೋಪಿಮ ಮಾನಸ್ತಸ್ಮಾದೇನಸೋ ದೇವ ರೀರಿಷಃ॥

ಯದಂತಿ ಯಚ್ಚ ದೂರಕೇ ಭಯಂ ವಿಂದತಿ ಮಾಮಿಹ।
ಪವಮಾನ ವಿತಜ್ಜಹಿ॥ ಪವಮಾನಸ್ಸೋ ಅದ್ಯನಃ ಪವಿತ್ರೇಣ ವಿಚರ್ಷಣಿಃ।
ಯಃ ಪೋತಾ ಸ ಪುನಾತುನಃ॥
ಯತ್ತೇ ಪವಿತ್ರ ಮರ್ಚಿಷ್ಯಗ್ನೇ ವಿತತ ಮಂತರಾ।
ಬ್ರಹ್ಮ ತೇನ ಪುನೀಹಿ ನಃ॥ ಯತ್ತೇ ಪವಿತ್ರ ಮರ್ಚಿವದಗ್ನೇ ತೇನ ಪುನೀಹಿ ನಃ

ಬ್ರಹ್ಮಸವೈಃ ಪುನೀಹಿ ನಃ॥
ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ।
ಮಾಂ ಪುನೀಹಿ ವಿಶ್ವತಃ॥
ತಮುಷ್ಟುಹಿ ಯ ಸ್ವಿಷು ಸ್ಸುಧನ್ವಾ ಯೋ ವಿಶ್ವಸ್ಯ ಕ್ಷಯತಿ ಭೇಷಜಸ್ಯ।
ಯಕ್ಷ್ವಾಮಹೇ ಸೌಮನಸಾಯ ರುದ್ರಂ ನಮೋಭಿ ರ್ದೇವಮಸುರಂ ದುವಸ್ಯ॥
ಕೃತ್ತವಾಸೋ ಯದ್ರಿ ರಿಪುರ್ನ ದೀವಿ ಯದ್ದ್ವಾಘಾ ಸತ್ಯ ಮುತಯನ್ನ ವಿದ್ಮ।
ಸರ್ವಾತಾವಿಷ್ಯ ಶಿಥಿರೇವ ದೇವಾ ಧಾತೇ ಸ್ಯಾಮ ವರುಣ ಪ್ರಿಯಾಸಃ॥
ತತ್ವಾ ಯಾಮಿ ಬ್ರಹ್ಮಣಾ ವಂದಮಾನ ಸ್ತದಾಶಾಸ್ತೇ
ಯಜಮಾನೋ ಹವಿರ್ಭಿಃ। ಅಹೇಳಮಾನೋ ವರುಣೇಹ
ಬೋ ಧ್ಯುರುಶಂ. ಸಮಾನ ಆಯುಃ ಪ್ರಮೋಷೀಃ॥
(ದಶ ಗಾಯತ್ರೀಂ ಜಪೇತ್।)

## - ಶಾರೀರ ಷಟ್ಕಜಪಃ -

ಶಾರೀರ ಷಟ್ಕಸ್ಯ। ಆತ್ಮಾ ಋಷಿಃ। ಸತ್ಯಂ ದೇವತಾ। ಪ್ರಕೃತಿ ಪುರುಷಂ ಛಂದಃ।

ಮಮ ಶರೀರ ಶುಧ್ಯರ್ಥೇ ಜಪೇ ವಿನಿಯೋಗಃ।

ಶಾರೀರಮಂತಃ ಕರಣೋಪಘಾತಂ
ವಾಚಶ್ಚ ವಿಷ್ಣುರ್ಭಗವಾನಶೇಷಃ।
ಶಮಂ ನಯತ್ವಸ್ತು ಮಮೇಹ ಶರ್ಮ
ಪಾಯಾದನಂತೇ ಹೃದಿ ಸನ್ನಿವಿಷ್ಟೇ॥
ಅಂತಃಶುದ್ಧಿಂ ಬಹಿಃ ಶುದ್ಧಿಂ ಶುದ್ಧೋ ಧರ್ಮಮಯೋಽಚ್ಯುತಃ।
ಸ ಕರೋತ್ವಮಲೇ ತಸ್ಮಿನ್ ಶುಚಿರೇವಾಸ್ಮಿ ಸರ್ವದಾ॥
ಬಾಹ್ಯೋಪಘಾತಾನನಘೋ ಬೌದ್ಧಾಂಶ್ಚ ಭಗವಾನಜಃ।
ಶಮಂ ನಯತ್ವನಂತಾತ್ಮಾ ವಿಷ್ಣು ಶ್ಚೇತಸಿ ಸಂಸ್ಥಿತಃ॥
ಶಾರೀರಂ ಮೇ ಹೃಷಿಕೇಶ ಪುಂಡರೀಕಾಕ್ಷ ಮಾನಸಮ್।
ಪಾಪಂ ಪ್ರಶಮಯಾದ್ಯ ತ್ವಂ ವಾಕ್ಕೃತಂ ಮಮ ಮಾಧವ॥
ಯದ್ಯಪ್ಯುಪಹತಃ ಪಾಪೈಃ ಯದಿವಾತ್ಯಂತ ದುಷ್ಕೃತೈಃ।
ತಥಾಪಿ ಸಂಸ್ಮರೇದ್ವಿಷ್ಣುಂ ಸರ್ವಪಾಪೈಃ ಪ್ರಮುಚ್ಯತೇ॥
ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂ ಗತೋಽಪಿ ವಾ।
ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ॥
ಅಗ್ನಿಃ ಶುಚಿ ವ್ರತತಮ ಶ್ಶುಚಿ ರ್ವಿಪ್ರ ಶ್ಶುಚಿಃ ಕವಿಃ।
ಶುಚೀ ರೋಚತ ಆಹುತಃ॥ ಉದಗ್ನೇ ಶುಚಯ ಸ್ತವ
ಶುಕ್ರಾ ಭ್ರಾಜಂತ ಈರತೇ। ತವ ಜ್ಯೋತೀಂಷ್ಯರ್ಚಯಃ।
ಏತೋ ನ್ವಿಂದ್ರಂ ಸ್ತವಾಮ ಶುದ್ಧಂ ಶುದ್ಧೇನ ಸಾಮ್ನಾ।

ಶುದ್ಧೈ ಶ್ರುಕ್ಷೈರ್ವಾ ವೃಧ್ವಾಂಸಂ ಶುದ್ಧ ಆಶೀರ್ವಾನ್ಮಮತ್ತು।
ಇಂದ್ರ ಶುದ್ಧೋನ ಆಗಹಿ ಶುದ್ಧ ಶ್ಶುದ್ಧಾಭಿ ರೂತಿಭಿಃ।
ಶುದ್ಧೋ ರಯಿಂ ನಿಧಾರಯ ಶುದ್ಧೋ ಮಮದ್ಧಿ ಸ್ತೋಮ್ಯಃ॥
ಇಂದ್ರ ಶುದ್ಧೋ ಹಿನೋ ರಯಿಂ ಶುದ್ಧೋ ರತ್ನಾನಿ ದಾಶುಷೇ।
ಶುದ್ಧೋ ವೃತ್ರಾಣಿ ಜಿಘ್ನಸೇ ಶುದ್ಧೋವಾಜಂ ಸಿಷಾಸಸಿ॥

ಸರ್ವಾಣಿ ಸ್ಥಲಾನಿ ಶುಚೀನಿ ಭವಂತು। [ಭವಂತು ಶುಚೀನಿ]

## ಬ್ರಹ್ಮ ದಂಡಃ

(ಕಟಿಂ ಬಧ್ವಾ, ಬ್ರಹ್ಮದಂಡಾರ್ಥಂ ಸತಿಲ ಹಿರಣ್ಯ ಕುಶಯುವಾಕ್ಷತಾನ್ ಗೃಹೀತ್ವಾ, ಬ್ರಾಹ್ಮಣಾನಾಂ ತ್ರಿಃ ಪ್ರದಕ್ಷಿಣ ನಮಸ್ಕಾರಾನ್ ಕುರ್ಯಾತ್।)

ಓಂ, ಓಂ, ಓಂ

ಸಮಸ್ತ ಸಂಪತ್ಸಮವಾಪ್ತಿ ಹೇತವಃ
ಸಮುತ್ಥಿತಾಪತ್ಕುಲ ಧೂಮ ಕೇತವಃ।
ಅಪಾರ ಸಂಸಾರ ಸಮುದ್ರ ಸೇತವಃ
ಪುನಂತು ಮಾಂ ಬ್ರಾಹ್ಮಣ ಪಾದಪಾಂಸವಃ॥೧॥

ಅಪದ್ಘನಧ್ವಾಂತ ಸಹಸ್ರಭಾನವಃ
ಸಮೀಹಿತಾರ್ಥಾರ್ಪಣ ಕಾಮಧೇನವಃ।
ಸಮಸ್ತ ತೀರ್ಥಾಂಬು ಪವಿತ್ರ ಮೂರ್ತಯಃ
ರಕ್ಷಂತು ಮಾಂ ಬ್ರಾಹ್ಮಣಪಾದ ಪಾಂಸವಃ॥೨॥

ಏತೇಭ್ಯೋ ಬ್ರಾಹ್ಮಣೇಭ್ಯೋನಮಃ ಪ್ರಾ॥ ಇಮೇಕುಶಾಃ, ಯಥಾಶಕ್ತಿ ಬ್ರಹ್ಮದಂಡಃ [ಅಸ್ತು ಬ್ರಹ್ಮದಂಡಃ]

ಸಪ್ರ॥

ಆಧಿವ್ಯಾಧಿಹರಂ ನೃಣಾಂ ಮೃತ್ಯು ದಾರಿದ್ರ್ಯ ನಾಶನಮ್।

ಶ್ರೀ ಪುಷ್ಟಿ ಕೀರ್ತಿದಂ ವಂದೇ ವಿಪ್ರಶ್ರೀ ಪಾದಪಂಕಜಮ್॥

ವಿಪ್ರೌಘದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ।

ವಂದನಾನ್ಮಂಗಳಾ ವಾಪ್ತಿ ರರ್ಚನಾದಚ್ಯುತಂ ಪದಮ್॥

ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣ ಹಿತಾಯ ಚ।

ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ॥

ಯಾವತೀರ್ವೈ ದೇವತಾ ಸ್ತಾ ಸ್ಸರ್ವಾ ವೇದವಿದಿ
ಬ್ರಾಹ್ಮಣೇ ವಸಂತಿ ತಸ್ಮಾದ್ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ
ದ್ವಿವೇದಿವೇ ನಮಸ್ಕುರ್ಯಾನ್ನಾಶ್ಲೀಲಂ ಕೀರ್ತಯೇ
ದೇತಾ ಏವ ದೇವತಾಃ ಪ್ರೀಣಾತಿ॥ (ನಮಸ್ಕೃತ್ಯ) ಪ್ರಾ॥

ಯಜಮಾನಸ್ಯ ಪಿತುಃ (ಮಾತುಃ) ಪ್ರತಿಸಾಂವತ್ಸರಿಕ ಮೃತಾಹಾನ್ನ ಶ್ರಾದ್ಧಂ ಕರ್ತುಂ ಮುಖ್ಯಕಾಲೋ ಭೂತ್ವಾ, ಮಮ ಅಧಿಕಾರ ಸಂಪದಸ್ತ್ವಿತಿ ಭವಂತೋ ಬ್ರುವಂತು।

[ಅಧಿಕಾರ ಸಂಪದಸ್ತು]

ಕಾಲಶ್ಚ ಮುಖ್ಯ ಕಾಲೋಸ್ತ್ವಿತಿ ಭವಂತೋ ಬ್ರುವಂತು।

[ಕಾಲಶ್ಚ ಮುಖ್ಯಕಾಲೋಸ್ತು]

– ಸಂಕಲ್ಪಃ –

ಸವ್ಯ॥ ಪ್ರಾಣಾನಾಯಮ್ಯ ಏವಂಗುಣ..........

ಪುಣ್ಯತಿಥೌ ಪ್ರಾ॥ (ಪ್ರಾಕ್ ದಕ್ಷಿಣಾಭಿಮುಖೋ ವಾಮಂ

ಜಾನ್ವಾಚ್ಯ, ದರ್ಭಮುಷ್ಟಿಂ ತಿಲಪಾತ್ರಂಚ ದಕ್ಷಿಣಾಂಕೇ ನಿಕ್ಷಿಪ್ಯ,)

ಯಜಮಾನಸ್ಯ (ಅಸ್ಮತ್) ಪಿತುಃ(ಮಾತುಃ) ಪ್ರತಿಸಾಂವತ್ಸರಿಕ ಮೃತಾಹಾನ್ನ ಶ್ರಾದ್ಧೇ ಪಿತೃ ಪಿತಾಮಹ ಪ್ರಪಿತಾಮಹಾನಾಂ– ದೇವ–ದೇವ–ದೇವ . ಶರ್ಮಣಾಂ ಗೋತ್ರಾಣಾಂ ವಸು ರುದ್ರ ಆದಿತ್ಯರೂಪಾಣಾಂ

(ಅಸ್ಮತ್ ಮಾತೃ ಪಿತಾಮಹೀ ಪ್ರಪಿತಾಮಹೀನಾಂ –ದೇವೀ– ದೇವೀ–ದೇವೀದಾನಾಂ ಗೋತ್ರಾಣಾಂ ವಸು ರುದ್ರ ಆದಿತ್ಯ ರೂಪಾಣಾಂ,)

ಸವ್ಯ॥ (ಪೂರ್ವಾಭಿಮುಖೋ ದಕ್ಷಿಣಂ ಜಾನ್ವಾಚ್ಯ, ದರ್ಭಮುಷ್ಟಿಂ ಯವಪಾತ್ರಂ ಚ ವಾಮಾಂಕೇ ನಿಕ್ಷಿಪ್ಯ,)

ಪುರೂರವಾರ್ದ್ರವ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ಚ ಪ್ರಾ॥

ಅಸ್ಮತ್ ಪಿತುಃ (ಮಾತುಃ) ಪ್ರತಿ ಸಾಂವತ್ಸರಿಕ ಮೃತಾಹಾನ್ನ ಶ್ರಾದ್ಧಂ ಸದೈವಂ ಅನ್ನೇನ ಹವಿಷಾ ಪಾರ್ವಣ ವಿಧಾನೇನ

ಯುಷ್ಮದನುಜ್ಞಯಾ ಅದ್ಯ ಕರಿಷ್ಯೇ [ಕ್ರಿಯತಾಮ್]

## ಕ್ಷಣಪ್ರಾರ್ಥನಾ

ಸವ್ಯ।

(ಬ್ರಾಹ್ಮಣಾಯ ಹಸ್ತೋದಕಂ ದತ್ವಾ,)

ಪುರೂರವಾರ್ದ್ರವ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ

ಸ್ಥಾನೇ ಆಹವನೀಯಾರ್ಥೇ ಕ್ಷಣಂ ಧೃತ್ವಾ, ಭವದ್ಭಿಃ

ಕ್ಷಣಃ ಪ್ರಸಾದಃ ಕರಣೀಯಃ [ಓಂ ತಥಾ]

ಪ್ರಾ॥ (ಬ್ರಾಹ್ಮಣಾಯ ಹಸ್ತೋದಕಂ ದತ್ವಾ,)

ಪಿತೃ ಪಿತಾಮಹ ಪ್ರಪಿತಾಮಹಾನಾಂ ದೇವ....ದೇವ....ದೇವ ಶರ್ಮಣಾಂ... ಗೋತ್ರಾಣಾಂ ವಸುರುದ್ರ ಆದಿತ್ಯರೂಪಾಣಾಂ ಸ್ಥಾನೇ (ಮಾತೃ ಪಿತಾಮಹೀ ಪ್ರಪಿತಾಮಹೀನಾಂ...ದೇವೀ...ದೇವೀ...ದೇವೀದಾನಾಂ ಗೋತ್ರಾಣಾಂ ವಸುರುದ್ರ ಆದಿತ್ಯರೂಪಾಣಾಂ. ಸ್ಥಾನೇ)

ಆಹವನೀಯಾರ್ಥೇ ಕ್ಷಣಂ ಧೃತ್ವಾ, ಭವದ್ಭಿಃ ಕ್ಷಣಃ ಪ್ರಸಾದಃ ಕರಣೀಯಃ। [ಓಂ ತಥಾ]

ಸವ್ಯ॥ (ಬ್ರಾಹ್ಮಣಾಯ ಹಸ್ತೋದಕಂ ದತ್ವಾ)

ಶ್ರಾದ್ಧಸಂರಕ್ಷಕ ಶ್ರೀ ಮಹಾವಿಷ್ಣುಸ್ಥಾನೇ ಆಹವನೀಯಾರ್ಥೇ

ಕ್ಷಣಂ ಧೃತ್ವಾ ಭವದ್ಭಿಃ ಕ್ಷಣಃ ಪ್ರಸಾದಃ ಕರಣೀಯಃ। [ಓಂ ತಥಾ]

ದೇವಾನಾಂ ಸ್ವಾಗತಮ್ [ಸುಸ್ವಾಗತಮ್]

ಪ್ರಾ॥ ಪಿತೃಣಾಂ ಸ್ವಾಗತಮ್ [ಸುಸ್ವಾಗತಮ್]

(ಮಾತೃಣಾಂ) ,, ,, ,,

ಸವ್ಯ॥ ವಿಷ್ಣೋಶ್ಚ ಸ್ವಾಗತಮ್ [ಸುಸ್ವಾಗತಮ್]

ಅಕ್ರೋಧನೈಃ ಶೌಚಪರೈಃ ಸತತಂ ಬ್ರಹ್ಮವಾದಿಭಿಃ।

ಭವಿತವ್ಯಂ ಭವದ್ಭಿಶ್ಚ ಮಯಾ ಚ ಶ್ರಾದ್ಧಕರ್ಮಣಿ॥ [ತಥಾಹಿ]

## ಪಾದಪ್ರಕ್ಷಾಳನಮ್ (ಮಂಡಲಪೂಜಾ)

(ಗೃಹಾಂಗಣೇ ಉತ್ತರಭಾಗೇ ಗೋಮಯೇನ ಭೂಶುದ್ಧಿಂ ಕೃತ್ವಾ ಚತುರಶ್ರಮಂಡಲಂ ಕೃತ್ವಾ,)

ಸವ್ಯ॥ ದೇವಪಾದ್ಯ ಮಂಡಲ ಸ್ಥಾನೇ ಇದಮಿದಮಾಸನಮ್।

ಪಾದ್ಯ ಸ್ಥಾನೇ ಇಮಾ ಆಪಃ। ಇಮೇ ಗಂಧಾಃ। ಇಮೇ ಯವಾಃ।

ಇಮೌ ದರ್ಭೌ। ಉದಕೇನೈವ ಅಷ್ಟಾರ್ಘ್ಯೈಸ್ಸಂಪೂರ್ಣಾರ್ಚನಮ್॥

ಪ್ರಾ॥ (ತದ್ದಕ್ಷಿಣತಃ ವರ್ತುಲಾಕಾರ ಮಂಡಲಂ ಕೃತ್ವಾ,)

ಪಿತೃ (ಮಾತೃ) ಪಾದ್ಯ ಮಂಡಲ ಸ್ಥಾನೇ, ಇಮಾ ಆಪಃ।

ಇಮೇ ಗಂಧಾಃ। ಇಮೇ ತಿಲಾಃ। ಇಮೇ ದರ್ಭಾಃ।

ಉದಕೇನೈವ ಅಷ್ಟಾರ್ಘ್ಯೈಸ್ಸಂಪೂರ್ಣಾರ್ಚನಮ್।

ಸವ್ಯ। (ಉತ್ತರೇ ಚತುರಶ್ರಮಂಡಲಂಕೃತ್ವಾ)

ವಿಷ್ಣುಸ್ಥಾನೇ ಇಮಾ ಆಪಃ। ಇಮೇಗಂಧಾಃ। ಇಮೇಯವಾಃ।

ಇಮೌ ದರ್ಭೌ। ಉದಕೇನೈವ ಅಷ್ಟಾರ್ಘ್ಯೈಃಸಂಪೂರ್ಣಾರ್ಚನಮ್

## ಪಾದಪ್ರಕ್ಷಾಳನಮ್

ಸವ್ಯ॥ ಪುರೂರವಾರ್ದ್ರವಸಂಜ್ಞಕಾ ವಿಶ್ವೇದೇವಾಃ,

(ದಕ್ಷಿಣಾದ್ಯುತ್ತರತಃ ದರ್ಭದ್ವಯಂ ನಿಕ್ಷಿಪ್ಯ) ಸ್ವಾಗತಮ್।

[ಸುಸ್ವಾಗತಮ್] (ಪವಿತ್ರಂ ವಿನಾ ನಮಸ್ಕೃತ್ಯ,)

ಪೂರೂರ ವಾರ್ದ್ರವ ಸಂಜ್ಞಕಾವಿಶ್ವೇದೇವಾಃ, ಸುಗಂಧ-ಕುಶ-ಯವೋದಕೇನ ಸ್ವಾಗತಾನಂತರ ಮಿದಂ ವಃ ಪಾದ್ಯಂ, ಇದಂ ವಃ ಪಾದ್ಯಂ [ಅಸ್ತುಪಾದ್ಯಮ್]

ಶಂನೋ ದ್ದೇವೀ ರಭಿಷ್ಟಯ ಆಪೋ ಭವಂತು ಪೀತಯೇ। ಶಂಯೋರಭಿಸ್ರವಂತುನಃ

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣ ಹಿತಾಯ ಚ।

ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ॥

(ಪುನಃ ಪವಿತ್ರಂ ಧೃತ್ವಾ,)

ಪಿತೃ ಪಿತಾಮಹ ಪ್ರಪಿತಾಮಹಾಃ,

(ಮಾತೃ ಪಿತಾಮಹೀ ಪ್ರಪಿತಾಮಹ್ಯಃ)

(ಉತ್ತರಾದಿ ದಕ್ಷಿಣಾತಃ ತ್ರೀನ್ ದರ್ಭಾನ್ ನಿಕ್ಷಿಪ್ಯ,)

ಸ್ವಾಗತಮ್ [ಸುಸ್ವಾಗತಮ್] (ಪವಿತ್ರಂವಿನಾ ನಮಸ್ಕೃತ್ಯ)

ಪ್ರಾ॥ ಪಿತೃ ಪಿತಾಮಹ ಪ್ರಪಿತಾಮಹಾಃ ದೇವ - ದೇವ - ದೇವ

ಶರ್ಮಾಣಃ, ....ಗೋತ್ರಾಃ ವಸುರುದ್ರ ಆದಿತ್ಯ ರೂಪಾಃ, (ಮಾತೃ ಪಿತಾಮಹೀ ಪ್ರಪಿತಾಮಹ್ಯಃ, ....ದೇವೀ...ದೇವೀ...ದೇವೀದಾಃ..... ಗೋತ್ರಾಃ, ವಸುರುದ್ರಾದಿತ್ಯರೂಪಾಃ)

ಸಗಂಧ ಕುಶ ತಿಲೋದಕೇನ ಸ್ವಾಗತಾನಂತರಂ ಇದಂ ವಃ ಪಾದ್ಯಮ್। ಸಗಂಧ ಕುಶತಿಲೋದಕೇನ ಸ್ವಾಗತಾನಂತರಂ ಇದಂ ವಃ ಪಾದ್ಯಮ್/ಸಗಂಧ ಕುಶತಿಲೋದಕೇನ ಸ್ವಾಗತಸಂತರಂ ಇದಂ ವಃ ಪಾದ್ಯಮ್ [ಅಸ್ತು ಪಾದ್ಯಮ್]

ಶಂನೋ ದೇವೀ ರಭಿಷ್ಟಯ ಆಪೋಭವಂತು ಪೀತಯೇ।

ಶಂಯೋರಭಿಸ್ರವಂತುನಃ॥

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣ ಹಿತಾಯ ಚ।

ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ॥

(ಪುನಃ ಪವಿತ್ರಂ ಧೃತ್ವಾ)

ಸವ್ಯ॥ ಶ್ರಾದ್ಧ ಸಂರಕ್ಷಕ ಶ್ರೀ ಮಹಾವಿಷ್ಣೋ,

(ದಕ್ಷಿಣಾದ್ಯುತ್ತರತಃ ದರ್ಭದ್ವಯಂ ನಿಕ್ಷಿಪ್ಯ,)

ಸ್ವಾಗತಂ [ಸುಸ್ವಾಗತಂ] (ಪವಿತ್ರಾಂ ವಿನಾ ನಮಸ್ಕೃತ್ಯ,)

ಸಗಂಧ ಕುಶಯುಪ್ರೋದಕೇನ ಸ್ವಾಗತಾನಂತರಂ ಇದಂ ವಃ ಪಾದ್ಯಂ ಸಗಂಧಕುಶಯುಪ್ರೋದಕೇನ ಸ್ವಾಗತಾನಂತರಂ ಇದಂ ವಃ ಪಾದ್ಯಮ್ [ಅಸ್ತು ಪಾದ್ಯಮ್]

ಶನ್ನೋ ದೇವೀ ರಭಿಷ್ಟಯ ಆಪೋಭವಂತು ಪೀತಯೇ।

ಶಂಯೋರಭಿಸ್ರವಂತುನಃ॥

ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣ ಹಿತಾಯ ಚ।

ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋನಮಃ।

(ಪವಿತ್ರಂ ಧೃತ್ವಾ)

ಸವ್ಯ॥

ಯದೀಚ್ಛಸಿ ಮಹಾರಾಜ ಸರ್ವತೀರ್ಥಾವಗಾಹನಮ್।

ವಿಪ್ರಪಾದ ವಿನಿರ್ಮುಕ್ತಂ ತೋಯಂ ಶಿರಸಿ ಧಾರಯ॥

ಪೃಥಿವ್ಯಾಂ ಯಾನಿ ತೀರ್ಥಾನಿ ತಾನಿ ತೀರ್ಥಾನಿ ಸಾಗರೇ।

ಸಾಗರೇ ಯಾನಿ ತೀರ್ಥಾನಿ ಪದೇ ವಿಪ್ರಸ್ಯ ದಕ್ಷಿಣೇ॥

(ಗಂಧಪಾತ್ರಂ ಮಂಡಲೇ ದಕ್ಷಿಣಾಗ್ರಂ ನಿಧಾಯ ಸ್ವಯಂ ಪಾದೌ ಪ್ರಕ್ಷಾಳ್ಯ ಆಚಾಮೇತ್॥)

ಕರ್ತುರಾಚಮನಂ ಪೂರ್ವಂ ಭೋಕ್ತುರಾಚಮನಂ ಪರಮ್

ಮಂಡಲಾತ್ಪೂರ್ವತೋ ದೇವಾಃ ಪಿತರಸ್ತು ತದುತ್ತರೇ।

ಕರ್ತಾ ಈಶಾನ್ಯ ಭಾಗೇ ತು ಏವಮಾಚಮನಂ ಸ್ಮೃತಮ್॥

## ಸಂಕಲ್ಪ:

(ಪವಿತ್ರಂ ಧೃತ್ವಾ। ಪ್ರಾಣಾನಾಯಮ್ಯ।) ಓಂ ಓಂ ಓಂ....
ಏವಂ ಗುಣೇತ್ಯಾದಿ ಪುಣ್ಯತಿಥೌ ಪ್ರಾ॥ ಭವದನುಜ್ಞಯಾ ಯಜಮಾನಸ್ಯ ಪಿತುಃ( ಮಾತುಃ) ಪ್ರಕ್ರಾಂತಂ ಪ್ರತಿಸಾಂವತ್ಸರಿಕ ಮೃತಾಹಾನ್ನ ಶ್ರಾದ್ಧಕರ್ಮ ಕರಿಷ್ಯೇ। [ಕುರುಷ್ವ]

## ಸ್ಥಾನ ಶುದ್ಧಿಃ

ಅಪಹತಾ ಅಸುರಾ ರಕ್ಷಾಂಸಿ ಪಿಶಾಚಾಃ।

ಯೇ ಕ್ಷಯಂತಿ ಪೃಥಿವೀಮನು। ಅನ್ಯತ್ರೇತೋ ಗಚ್ಛಂತು

ಯತ್ರೈಷಾಂ ಗತಂ ಮನಃ॥ (ಇತಿ ಅಪ್ರದಕ್ಷಿಣಂ ತಿಲಾನ್ವಿಕೀರ್ಯ,

ದ್ವಾರ ವಿದ್ವೇಷಹನನಾರ್ಥಂ ಸತಿಲ ಕುಶಮೂಲಾನ್ ದ್ವಾರ ದೇಶೇ ನಿಕ್ಷಿಪ್ಯ।)

ಉದೀರತಾ ಮವರ ಉತ್ಪಾರಾಸ ಉನ್ಮಧ್ಯಮಾಃ ಪಿತರಃ

ಸೋಮ್ಯಾಸಃ। ಅಸುಂ ಯ ಈಯುರ ವೃಕಾ ಋತಜ್ಞಾಸ್ತೇನೋ ವಂತು ಪಿತರೋ ಹವೇಷು॥

(ಪಿತೃಪುರತಃ ಭೂಶುದ್ಧಿಂ ಕೃತ್ವಾ,)

ಸವ್ಯ॥ ಉದೀರತಾ....ಹವೇಷು॥ (ವಿಶ್ವೇದೇವ ಪುರತಃ

ಭೂಶುದ್ಧಿಂ ಕೃತ್ವಾ, ವಿಷ್ಣೋಃಸ್ಥಾನೇ ಭೂಶುದ್ಧಿಂ ಕೃತ್ವಾ,

ಪಾಕಾದೀನ್ ಗಾಯತ್ರ್ಯಾ ಪ್ರೋಕ್ಷ್ಯ,)

## – ಅನುಜ್ಞಾ

ಶ್ರಾದ್ಧಕಾಲೇ ಗಯಾಂ ಧ್ಯಾತ್ವಾ ಧ್ಯಾತ್ವಾ ದೇವಂ ಜನಾರ್ದನಮ್।

ವಸ್ವಾದೀಂಶ್ಚ ಪಿತೃನ್ ಧ್ಯಾತ್ವಾ ತತಃ ಶ್ರಾದ್ಧಂ ಪ್ರವರ್ತಯೇ॥

[ಪ್ರವರ್ತಯ]

ಶ್ರದ್ಧಾರ್ಥಂ ಮಯಾ ಸಂಪಾದಿತಾಃ ಪದಾರ್ಥಾಃ ದೇಶತಃ

ಕಾಲತಶ್ಚ ಶ್ರಾದ್ಧಹವಿರ್ಯೋಗ್ಯಾ ಭವಂತ್ವಿತಿ ಭವಂತೋ ಬ್ರುವಂತು।

· [ಶ್ರಾದ್ಧ ಹವಿರ್ಯೋಗ್ಯಾಭವಂತು]

ಪಾಕಾದೀನಾಂ ಪವಿತ್ರತಾಸ್ತ್ವಿತಿ ಭವಂತೋ ಬ್ರುವಂತು।

[ಪಾಕಾದೀನಾಂ ಪವಿತ್ರತಾಸ್ತು]

## – ವಿಶ್ವೇದೇವಾರ್ಚನಮ್

(ವಿಶ್ವೇದೇವ ಸಮೀಪೇ ಉದಙ್ಮುಖಃ ದಕ್ಷಿಣಂ ಜಾನ್ವಾಚ್ಯ, ಉಪವಿಶ್ಯ, ಹಸ್ತೋದಕಂ ದತ್ವಾ,)

ಪುರೂರವಾರ್ದ್ರವ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ಭೋಜನ ಸ್ಥಾನೇ ಇದಮಿದ ಮಾಸನಮ್ [ಸುಖಾಸನಮ್]

ಆಸ್ಯತಾಂ (ಧ)ಘರ್ಮೋಽಸಿ, ಆಪಃ (ಆಸ್ಯತೇ)

(ನಿರಂಗುಷ್ಠಂ ಕರಂ ಧೃತ್ವಾ,)

ವಿಶ್ವೈರ್ದೇವೈಃ ಕ್ಷಣಃ ಕ್ರಿಯತಾಮ್ [ಓಂ ತಥಾ]

ಪ್ರಾಪ್ನುವಂತು ಭವಂತಃ [ಪ್ರಾಪ್ನುವಾಮ]

(ತತ್ಪುರತಃ ನೈರ್ಋತ್ಯಾದೀಶಾನಾಂತಂ ಭೂಮಿಂ ಪ್ರೋಕ್ಷ್ಯ, ದ್ವಾ, ದ್ವಾ, ದರ್ಭಾ ಪ್ರಾಗಗ್ರಾ ನಿಧಾಯ, ಪಾತ್ರದ್ವಯಂ ನ್ಯಗ್ಬಿಲಮಾಸಾದ್ಯ, ಪ್ರೋಕ್ಷ್ಯ, ಉದ್ಧೃತ್ಯ, ಪುನಃ ಪ್ರೋಕ್ಷ್ಯ, ಉಪರಿ ದ್ವಾ ದ್ವಾ ದರ್ಭಾ ಪ್ರಾಗಗ್ರಾ ನಿಧಾಯ, ಉದಕಂ ಪೂರಯಿತ್ವಾ).

ಶಂನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ॥

ಶಂಯೋರಭಿಸ್ರವಂತುನಃ॥ (ಇತ್ಯನುಮಂತ್ರ್ಯ)

ಯವೋಽಸಿ ಧಾನ್ಯರಾಜೋ ವಾ ವಾರುಣೋ ಮಧುಸಂಯುತಃ

ನಿರ್ಣೋದಃ ಸರ್ವಪಾಪಾನಾಂ ಪವಿತ್ರ ಮೃಷಿಭಿಃ ಸ್ಮೃತಮ್।

(ಇತಿಯವಾನ್ ವಿಕೀರ್ಯ,)

ಅರ್ಘ್ಯಪಾತ್ರಯೋಃ ಅಯಮಯಂ ಗಂಧಃ

ಇಮಾನಿ ಶ್ರೀ ತುಲಸೀ ಭೃಂಗರಾಜ ದರ್ಭಪತ್ರ ಯೂಥಿಕಾ ಕುಸುಮಾನಿ ಚ ಸ್ವಾಹಾ ನಮಃ।

ಸರ್ವೋಪಚಾರಾಃ ಯವೈ ಸ್ಸಂಪೂರ್ಣಾಸ್ಸಂತು

ದೀಪಪಾತ್ರೇ ಸಂಪನ್ನೇ [ಸುಸಂಪನ್ನೇ]

ಪಾತ್ರಯೋಃ ಸಂಪಾದಿತೌ ಸ್ವಾಹಾರ್ಘ್ಯೌ ಸ್ವಾಹಾರ್ಘ್ಯೌ, (ಸ್ತಾಂ ಅರ್ಘ್ಯೌ)

(ಹಸ್ತೋದಕಂ ದತ್ವಾ, ಕುಶಯವಾನ್ ಗೃಹೀತ್ವಾ,

ತಿಷ್ಠನ್,) ಪುರೂರ ವಾರ್ದ್ರವ ಸಂಜ್ಞಕಾನ್ ವಿಶ್ವಾನ್ ದೇವಾನ್

ಭವತ್ಸು ಆವಾಹಯಿಷ್ಯೇ [ಆವಾಹಯ]

ವಿಶ್ವೇ ದೇವಾಸ ಆಗತ ಶೃಣುತಾ ಮ ಇಮಂ ಹವಮ್।

ಏದಂ ಬರ್ಹಿ ರ್ನಿಷೀದತ॥

(ಬ್ರಾಹ್ಮಣಸ್ಯ ದಕ್ಷಿಣತಃ ಪಾದಾದಿ ಮೂರ್ಧ ಪರ್ಯಂತಂ

ಯವೈರಭ್ಯರ್ಚ್ಯ, ಶಿಷ್ಟಾನ್ ಪಾದಮೂಲೇ ನಿಕ್ಷಿಪ್ಯ, ಅಂಜಲಿಂ ಬಧ್ವಾ,)

ವಿಶ್ವೇ ದೇವಾಃ ಶೃಣು ತೇಮಂ ಹವಂ ಮೇ ಯೇ ಅಂತರಿಕ್ಷೇ ಯ ಉಪದ್ಯವಿಷ್ಠ। ಯೇ ಅಗ್ನಿ ಜಿಹ್ವಾ ಉತ ವಾ ಯಜತ್ರಾ ಆಸದ್ಯಾಸ್ಮಿನ್ ಬರ್ಹಿಷಿ ಮಾದಯಧ್ವಮ್।

ಪುರೂರ ವಾರ್ದ್ರವ ಸಂಜ್ಞಕಾನ್ ವಿಶ್ವಾನ್ ದೇವಾನ್ ಭವತ್ಸು ಆವಾಹಯಾಮಿ [ಆವಾಹಯ] (ಉಪವಿಶ್ಯ, ಪಾತ್ರೋಪರಿ ಸ್ಥಿತಾನ್ ದರ್ಭಾನ್ ಬ್ರಾಹ್ಮಣ ಹಸ್ತೇ ನಿಧಾಯ,)

ಪುರೂರ ವಾರ್ದ್ರವ ಸಂಜ್ಞಕಾ ವಿಶ್ವೇದೇವಾಃ,

ಇದಂ ವೋ ಅರ್ಘ್ಯಂ ಸ್ವಾಹಾ ನಮಃ [ಅಸ್ತ್ವರ್ಘ್ಯಮ್]

**(ತತಃ ಶುದ್ಧೋದಕಂ)**

ಯಾ ದಿವ್ಯಾ ಆಪಃ ಪೃಥಿವಿ ಸಂಬಭೂವುರ್ಯಾ

ಅಂತರಿಕ್ಷ್ಯಾ ಉತ ಪಾರ್ಥಿವೀರ್ಯಾಃ।

ಹಿರಣ್ಯವರ್ಣಾ ಯಜ್ಞಿಯಾ ಸ್ತಾನ ಆಪ ಶ್ಯಂ

ಸ್ಯೋನಾ ಭವಂತು। **(ತತಃ ಶುದ್ಧೋದಕಮ್।)**

ಪುರೂರ ವಾರ್ದ್ರವ ಸಂಜ್ಞಕಾ ವಿಶ್ವೇದೇವಾಃ, ಇದಂ ವೋ ಅರ್ಘ್ಯಂ ಸ್ವಾಹಾ ನಮಃ [ಅಸ್ತ್ವರ್ಘ್ಯಮ್]

**(ತತಶ್ಶುದ್ಧೋದಕಮ್।)**

ಯಾದಿವ್ಯಾ....ಸ್ಯೋನಾ ಭವಂತು। **(ತತಃ-ಶುದ್ಧೋದಕಮ್)**

ವಿಶ್ವೇಭ್ಯೋ ದೇವೇಭ್ಯಃ ಪಾತ್ರಯೋಃ ಸ್ಥಾನೇ ಸ್ಥಃ।

(ಇತಿಯವಾನ್ ವಿಕೀರ್ಯ, ಶುದ್ಧದೇಶೇ ಸ್ಥಾಪಯೇತ್।)

(ಹಸ್ತೋದಕಂ ದತ್ವಾ, ಪವಿತ್ರಂ ವಿನಾ)

ಗಂಧದ್ವಾರಾಂ....ಶ್ರಿಯಮ್॥

ಪುರೂರವಾರ್ದ್ರವ ಸಂಜ್ಞಕಾ ವಿಶ್ವೇದೇವಾಃ

ಅನುಲೇಪನಾರ್ಥೇ ಅಮೀ ವೋ ಗಂಧಾಃ [ಸುಗಂಧಾಃ]

ಆಯನೇತೇ.....ಇಮೇ॥

ಅಲಂಕರಣಾರ್ಥೇ ಇಮೇ ಯವಾಃ। [ಸುಯವಾಃ]

ಮಾಲ್ಯಾರ್ಥೇ ಇಮಾನಿ ವಃ ಶ್ರೀ ತುಳಸೀ ಭೃಂಗರಾಜ

ದರ್ಭಪತ್ರ ಯೂಧಿಕಾ ಕುಸಮಾನಿ ಚ ಸ್ವಾಹಾ ನಮಃ।

ಉದಕೇನೈವ ಸಾಂಕಲ್ಪಿತೋ ವೋ ಧೂಪಃ। [ಸುಧೂಪಃ]

ಜ್ವಾಲಾಲಾಭೇನ ಸೂರ್ಯಸ್ಥಿತಂ ವೋ ಜ್ಯೋತಿಃ। [ಸುಜ್ಯೋತಿಃ]

ಯುವಾಸುವಾಸಾಃ ಪರಿವೀತ ಆಗಾತ್ಸ ಉ ಶ್ರೇಯಾನ್

ಭವತಿ ಜಾಯಮಾನಃ। ತಂ ಧೀರಾಸಃ ಕವಯ

ಉನ್ನಯಂತಿ ಸ್ವಾಧ್ಯೋ೩ ಮನಸಾ ದೇವಯಂತಃ॥

ಅಂತಃ ಪ್ರಾವರಣೀಯಾರ್ಥಂ ಬಹಿಃ ಪ್ರಾವರಣೀಯಾರ್ಥಂ

ವಸ್ತ್ರಮಾಚ್ಛಾದನಮ್। [ಅಸ್ತು ಆಚ್ಛಾದನಮ್]

ಧಾರಣಾರ್ಥೇ ಯಜ್ಞೋಪವೀತಮ್ [ಅಸ್ತು]

ಪವಿತ್ರಾರ್ಥೌ ಇಮೌ ಕುಶೌ। [ಸುಕುಶೌ]

ಸರ್ವಾಲಂಕರಣಾರ್ಥೇ ಕಿಂಚಿದ್ಧಿರಣ್ಯಮ್[ಅಸ್ತು]

ಅರ್ಚನ ವಿಧೇಃ ಸಂಪೂರ್ಣತಾಸ್ತು। [ಅಸ್ತು]

ಯಥಾವಿಧ್ಯರ್ಚಿತ ಮಸ್ತು [ಅಸ್ತು]

ಸಕಲಾರಾಧನೈಃ ಸ್ವರ್ಚಿತಮಸ್ತು। [ಅಸ್ತು]

ಯುಷ್ಮದನುಜ್ಞಯಾ ಪಿತೃಣಾಮರ್ಚನಂ ಕರಿಷ್ಯೇ। [ಕುರುಷ್ವ]

## ಪಿತ್ರರ್ಚನಮ್

ಪ್ರಾ॥ ಪಿತೃಸ್ಥಾನೇ ಪ್ರಾಗ್ದಕ್ಷಿಣಾಭಿಮುಖೋ ವಾಮಂ ಜಾನ್ವಾಚ್ಯ, ಉಪವಿಶ್ಯ, ಹಸ್ತೋದಕಂ ದತ್ವಾ, ಪಿತೃಪಿತಾಮಹ ಪ್ರಪಿತಾಮಹಾನಾಂ ದೇವ..... ದೇವ.... ದೇವ ಶರ್ಮಣಾಂ...ಗೋತ್ರಾಣಾಂ....ರೂಪಾಣಾಂ ಭೋಜನ ಸ್ಥಾನೇ ಇದಮಿದಮಾಸನಮ್। [ಸುಖಾಸನಮ್] (ಮಾತೃ ಪಿತಾಮಹೀ

ಪ್ರಪಿತಾಮಹೀನಾಂ...ದೇವೀ... ದೇವೀ....ದೇವೀ ದಾನಾಂ...... ಗೋತ್ರಾಣಾಂ.....
ರೂಪಾಣಾಂ) ಭೋಜನಸ್ಥಾನೇ ಇದಮಿದಮಾಸನಮ್

[ಸುಖಾಸನಮ್]

ಆಸ್ಯತಾಂ, (ಧ) ಘರ್ಮೋಽಸಿ, ಆಪಃ [ಆಸ್ಮಹೇ]

(ನಿರಂಗುಷ್ಠಂ ಹಸ್ತಂ ಗೃಹೀತ್ವಾ) ಪಿತ್ರೇ (ಮಾತ್ರರ್ಥೇ) ಕ್ಷಣಃ ಕ್ರಿಯತಾಮ್ [ಓಂ ತಥಾ]

ಪ್ರಾಪ್ನುವಂತು ಭವಂತಃ [ಪ್ರಾಪ್ನುವಾಮ]

ಪಿತುಃ (ಮಾತುಃ) ದಕ್ಷಿಣಭಾಗೇ ಆಗ್ನೇಯ್ಯಾಂ ದಿಶಿ, ವಾಯುವ್ಯಾದಾಗ್ನೇಯಾಂತಂ ಭೂಮಿಂ ತ್ರಿಧಾ ಪ್ರೋಕ್ಷ್ಯ, ಪ್ರೋಕ್ಷಿತ ಭೂಮೌ ತ್ರೀನ್ ತ್ರೀನ್ ದರ್ಭಾನ್ ದಕ್ಷಿಣಾಗ್ರಾನ್ ನಿಧಾಯ, ಪಾತ್ರತ್ರಯಂ ನ್ಯಗ್ಬಿಲಮಾಸಾದ್ಯ, ಉದ್ಧೃತ್ಯ, ಉತ್ತಾನಾನಿ ಪ್ರೋಕ್ಷ್ಯ, ತದುಪರಿ ತ್ರೀನ್ ತ್ರೀನ್ ದರ್ಭಾನ್ ದಕ್ಷಿಣಾಗ್ರಾನ್ ನಿಧಾಯ, ತಿಲಾನ್ ವಿಕೀರ್ಯ, ಉದಕಂ ಪೂರಯಿತ್ವಾ) ಶಂನೋ ದೇವೀ....ನಃ॥ (ಸಕೃದಭಿಮಂತ್ರ್ಯ)

ತಿಲೋಽಸಿ ಸೋಮದೈವತ್ಯೋ ಗೋಸವೇ ದೇವ ನಿರ್ಮಿತಃ।

ಪ್ರತ್ನವದ್ಭಿಃ ಪ್ರತ್ತಃ ಸ್ವಧಯಾ।

ಪಿತೄನ್ (ಮಾತೄಃ) ಇಮಾನ್ ಲೋಕಾನ್ ಪ್ರೀಣಯಾಹಿ ನಃ ಸ್ವಧಾನಮಃ।
ಇತಿ ಪಿತೃಪಾತ್ರೇ (ಮಾತೃ) ತಿಲಾನ್ ವಿಕೀರ್ಯ,

ತಿಲೋಽಸಿ ಸೋಮ ದೈವತ್ಯೋ ಗೋಸವೇ ದೇವ ನಿರ್ಮಿತಃ।

ಪ್ರತ್ನವದ್ಭಿಃ ಪ್ರತ್ತಃ ಸ್ವಧಯಾ॥ ಪಿತಾಮಹಾನ್ (ಪಿತಾಮಹೀಃ)

ಇಮಾನ್ ಲೋಕಾನ್ ಪ್ರೀಣಯಾಹಿ ನಃ ಸ್ವಧಾ ನಮಃ।

ಪಿತಾಮಹಪಾತ್ರೇ (ಪಿತಾಮಹೀ) ತಿಲಾನ್ವಿಕೀರ್ಯ,

ತಿಲೋಽಸಿ........। ಸ್ವಧಯಾ॥ ಪ್ರಪಿತಾಮಹಾನ್ (ಪ್ರಪಿತಾಮಹೀಃ)

ಇಮಾನ್ ಲೋಕಾನ್ ಪ್ರೀಣಯಾಹಿ ನಃ ಸ್ವಧಾ ನಮಃ।

ಪ್ರಪಿತಾಮಹ ಪಾತ್ರೇ (ಪ್ರಪಿತಾಮಹೀ)ತಿಲಾಸ್ತ್ವಕೀರ್ಯ

ಅರ್ಘ್ಯ ಪಾತ್ರೇಷು ಅಯಮಯಂ ಗಂಧಃ।

ಇಮಾನಿ ವಃ ಶ್ರೀ ತುಲಸೀ ಭೃಂಗರಾಜ ದರ್ಭಪತ್ರ ಯೂಥಿಕಾ ಕುಸುಮಾನಿ ಚ ಸ್ವಧಾ ನಮಃ।

ಪಿತೃಪಾತ್ರಂ (ಮಾತೃ) ಸಂಪನ್ನಮ್ [ಸುಸಂಪನ್ನಮ್]

ಪಿತಾಮಹ (ಪಿತಾಮಹೀ) ಪಾತ್ರಂ ಸಂಪನ್ನಮ್ [ಸುಸಂಪನ್ನಮ್]

ಪ್ರಪಿತಾಮಹ (ಪ್ರಪಿತಾಮಹೀ) ಪಾತ್ರಂ ಸಂಪನ್ನಮ್ [ಸುಸಂಪನ್ನಮ್]

(ಇತ್ಯನುಮಂತ್ರ್ಯ)

ಪಾತ್ರೇಷು ಸಂಪಾದಿತಾಃ ಸ್ವಧಾರ್ಘ್ಯಾಃ ಸ್ವಧಾರ್ಘ್ಯಾಃ, ಸ್ವಧಾರ್ಘ್ಯಾಃ।

(ಇತ್ಯನುಮಂತ್ರ್ಯ)

(ವಿಪ್ರಾಯ। ಹಸ್ತೋದಕಂ ದತ್ವಾ, ಕುಶತಿಲಾನ್ ಗೃಹೀತ್ವಾ, ತತಸ್ತಿಷ್ಠನ್), ಪಿತೃಪಿತಾಮಹ ಪ್ರಪಿತಾಮಹಾನ್ ದೇವ...ದೇವ...ದೇವ ಶರ್ಮಣಃ.... ಗೋತ್ರಾನ್....ರೂಪಾನ್.

(ಮಾತೃ ಪಿತಾಮಹೀ ಪ್ರಪಿತಾಮಹೀ....ದೇವೀ.....ದೇವೀ.... ದೇವೀದಾಃ... ಗೋತ್ರಾಃ ವಸುರುದ್ರ ಆದಿತ್ಯ ರೂಪಾಃ) ಪ್ರತಿ ಸಾಂವತ್ಸರಿಕ ಮೃತಾಹಾನ್ನಶ್ರಾದ್ಧೇ ಭವತ್ಸು ಆವಾಹಯಿಷ್ಯೇ [ಆವಾಹಯ]

ಉಶಂತಸ್ತ್ವಾ ನಿಧೀಮಹ್ಯುಶಂತಃ ಸಮಿಧೀಮಹಿ।

ಉಶನ್ನುಶತ ಆವಹ ಪಿತೄನ್ ಹವಿಷೇ ಅತ್ತವೇ॥

ವಿಪ್ರಸ್ಯ ವಾಮಭಾಗೇ ಮೂರ್ಧಾದಿ ಪಾದಪರ್ಯಂತಂ ಅಭ್ಯರ್ಚ್ಯ,

ಶಿಷ್ಟಾನ್ ತಿಲಾನ್ ಪಾದ ಮೂಲೇ ನಿಕ್ಷಿಪೇತ್।

ತತಃ ಅಂಜಲಿಂ ಬದ್ಧ್ವಾ,

ಆಯಂತು ನಃ ಪಿತರಃ ಸೋಮ್ಯಾಸೋಽಗ್ನಿಷ್ವಾತ್ತಾಃ ಪಥಿಭಿ

ದೇವ್ವಾ ಯಾನ್ಸೈ:। ಅಸ್ಮಿನ್ ಯಜ್ಞೇ ಸ್ವಧಯಾ ಮದಂತ್ವಧಿ

ಬ್ರುವಂತು ತೇ ಽವಂತ್ವಸ್ಮಾನ್॥ ಇತ್ಯುಪಸ್ಥಾಯ।

ಪಿತೃ ಪಿತಾಮಹ ಪ್ರಪಿತಾಮಹಾನ್ (ಮಾತೃಪಿತಾಮಹೀ ಪ್ರಪಿತಾಮಹೀಃ)

ಭವತ್ಸು ಆವಾಹಯಾಮಿ [ಆವಾಹಯ]

(ಉಪವಿಶ್ಯ, ಪಾತ್ರೋಪರಿ ಸ್ಥಿತಾನ್ ದರ್ಭಾನ್ ವಿಪ್ರಹಸ್ತೇ ನಿಧಾಯ, ಹಸ್ತೋದಕಂ ದತ್ವಾ,)

ಸವ್ಯ॥ ಪಿತರಿದಂ ತೇ (ಮಾತರಿದಂ–ತೇ) ಅರ್ಘ್ಯಂ ಸ್ವಧಾ ನಮಃ [ಅಸ್ತ್ವರ್ಘ್ಯಮ್]

ಯಾದಿವ್ಯಾ ಆಪಃ ಪೃಥಿವಿ ಸಂಬಭೂವು ರ್ಯಾ ಅಂತರಿಕ್ಷ್ಯಾ ಉತ ಪಾರ್ಥಿವೀರ್ಯಾಃ। ಹಿರಣ್ಯವರ್ಣಾ ಯಜ್ಞಿಯಾಸ್ತಾನ ಆಪಃ ಶಂ ಸ್ಯೋನಾ ಭವಂತು॥ (ತತಃ ಶುದ್ಧೋಕಮ್)

ಪಿತಾಮಹ (ಪಿತಾಮಹಿ) ಇದಂ ತೇ ಅರ್ಘ್ಯಂ ಸ್ವಧಾನಮಃ।

ಅಸ್ತ್ವರ್ಘ್ಯಂ) (ತತಶ್ಶುದ್ಧೋದಕಮ್।)

ಯಾದಿವ್ಯಾ.....ಭವಂತು। (ತತಶ್ಶುದ್ಧೋದಕಮ್।,

ಪ್ರಪಿತಾಮಹ (ಪ್ರಪಿತಾಮಹಿ) ಇದಂ ತೇ ಅರ್ಘ್ಯಂ ಸ್ವಧಾ ನಮಃ [ಅಸ್ತ್ವರ್ಘ್ಯಂ] (ತತಃ ಶ್ಶುದ್ಧೋದಕಮ್,

ಯಾ ದಿವ್ಯಾ....ಭವಂತು। (ತತಶ್ಶುದ್ಧೋಕಮ್। ಪ್ರಾ॥ ಪ್ರಪಿತಾಮಹ (ಪ್ರಪಿತಾಮಹೀ) ಪಾತ್ರೋದಕಶೇಷಂ - ಪಿತಾಮಹ (ಪಿತಾಮಹೀ) ಪಾತ್ರೋದಕೇನಿಷಿಚ್ಯ, ಪಿತಾಮಹ (ಪಿತಾಮಹೀ) ಪ್ರಾತ್ರೋದಕ ಶೇಷಂ ಪಿತೃ (ಮಾತೃ) ಪಾತ್ರೇ ನಿಷಿಚ್ಯ, ಅರ್ಘ್ಯ ಸಮಯೇ ಅಧಃ ಸೃತಂ ಜಲಂ ಆದಾಯ

ಸವ್ಯ॥ ಸಂಸ್ರವಾನ್ ಸಮವನೀಯ, ತಾಭಿರದ್ಭಿಃ ಪುತ್ರಕಾಮೋ ಮುಖಮನಕ್ತಿ। [ಪುತ್ರವಾನ್ ಭವ]

ಪ್ರಾ॥ ಪ್ರಪಿತಾಮಹ ಪಾತ್ರೇಣ (ಪ್ರಪಿತಾಮಹೀ) ಪಿತೃಪಾತ್ರಂ (ಮಾತೃ ಪಾತ್ರಂ) ಪಿದಧ್ಯಾತ್।

